# ಚಿತ್ರಕಲಾವಿದ ರುಮಾಲೆ ಚನ್ನಬಸವಯ್ಯನವರ

## ಬದುಕು ಮತ್ತು ಕಲಾಕೃತಿಗಳು

ಎಂ. ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ

ಸಂಶೋಧನ ಪ್ರಬಂಧ



701-710



710



ಲಲಿತಕಲಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ ಹಂಪಿ

ವಿದ್ಯಾರಣ್ಯ ೫೮೩೨೭೬

ಮಾರ್ಗದರ್ಶಕರು

ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು

710

ಸಿರಿಗನ್ನಡ ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಚಿತ್ರಕಲಾವಿದ ರುಮಾಲೆ ಚನ್ನಬಸವಯ್ಯನವರ ಬದುಕು ಮತ್ತು ಕಲಾಕೃತಿಗಳು

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನಾ ಪ್ರಬಂಧ)

ಸಂಶೋಧಕರು
ರಂಗಸ್ವಾಮಿ ಆರ್.

920
CHA
048520



ಮಾರ್ಗದರ್ಶಕರು
ಡಾ. ಎಸ್.ಸಿ. ಪಾಟೀಲ
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು



ಲಲಿತಕಲಾ ನಿಕಾಯ
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೮

## ಪ್ರಮಾಣ ಪತ್ರ

ಚಿತ್ರಕಲಾವಿದ ರುಮಾಲೆ ಚನ್ನಬಸವಯ್ಯನವರ ಬದುಕು ಮತ್ತು ಕಲಾಕೃತಿಗಳು ಎಂಬ ಶೀರ್ಷಿಕೆಯ ಸಂಶೋಧನೆ ಪ್ರಬಂಧವನ್ನು ಡಾ. ಎಸ್.ಸಿ. ಪಾಟೀಲ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ. ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಈ ಪ್ರಬಂಧವನ್ನು ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಈ ಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Rangaswamy R.

ದಿನಾಂಕ : 15/10/09

ಸ್ಥಳ : ವಿದ್ಯಾರಣ್ಯ

(ರಂಗಸ್ವಾಮಿ ಆರ್.)
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

# ದೃಢೀಕರಣ ಪತ್ರ

ಚಿತ್ರಕಲಾವಿದ ರುಮಾಲೆ ಚನ್ನಬಸವಯ್ಯನವರ ಬದುಕು ಮತ್ತು ಕಲಾಕೃತಿಗಳು ಎಂಬ ಶೀರ್ಷಿಕೆಯ ಸಂಶೋಧನೆ ಪ್ರಬಂಧವನ್ನು ರಂಗಸ್ವಾಮಿ ಆರ್. ಅವರು ನನ್ನ ಮಾರ್ಗದರ್ಶನ ದಲ್ಲಿ ಸಿದ್ಧಪಡಿಸಿರುತ್ತಾರೆ. ಎಂ.ಫಿಲ್ ಪದವಿಗಾಗಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೧೫-೧೦-೦೬

ಸ್ಥಳ : ವಿದ್ಯಾರಣ್ಯ

(ಡಾ. ಎಸ್.ಸಿ. ಪಾಟೀಲ)

ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು

ದೃಶ್ಯಕಲಾ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ

ಜಗನ್ನಾಥ್' ಗ್ರಂಥಾಲಯ.
ಕನ್ನಡ ವಿಶ್ವವಿದ್ಯಾಲಯ. ಹಂಪಿ.

## ಪರಿವಿಡಿ

ಅಧ್ಯಾಯ ಒಂದು
ಅಧ್ಯಯನದ ಉದ್ದೇಶ ಸ್ವರೂಪ ವ್ಯಾಪ್ತಿ ಮತ್ತು ವೈಧಾನಿಕತೆ ೦೧

ಅಧ್ಯಾಯ ಎರಡು
ಸಾಂಸ್ಕೃತಿಕ ಪರಿಸರ, ಬಾಲ್ಯ ಜೀವನ ಮತ್ತು ಕಲಾ ಶಿಕ್ಷಣ ೧೩

ಅಧ್ಯಾಯ ಮೂರು
ರುಮಾಲೆ ಚನ್ನಬಸವಯ್ಯನವರ ವೃತ್ತಿ ಮತ್ತು ಪ್ರವೃತ್ತಿ ೨೯

ಅಧ್ಯಾಯ ನಾಲ್ಕು
ರುಮಾಲೆ ಚನ್ನಬಸವಯ್ಯನವರ ಕಲಾಕೃತಿಗಳ ಹರವು ವಸ್ತುವಿಷಯ ೪೬

ಅಧ್ಯಾಯ ಐದು
ರುಮಾಲೆ ಅವರ ಕಲಾಕೃತಿಗಳ ಮೇಲಾದ ಪ್ರಭಾವ ಪ್ರೇರಣೆ,
ರಚನಾಶೈಲಿ ಹಾಗೂ ತಂತ್ರಗಾರಿಕೆ ೭೮

ಅಧ್ಯಾಯ ಆರು
ಸಮಾರೋಪ ೯೨

ಅನುಬಂಧಗಳು

೧. ರುಮಾಲೆಯವರ ಜೀವನ ೯೭
೨. ರುಮಾಲೆಯವರ ಕಲಾಕೃತಿಗಳ ಸಂಗ್ರಹ ೯೯
೩. ಪರಾಮರ್ಶನ ಗ್ರಂಥಗಳು ೧೦೩
೪. ಛಾಯಾಚಿತ್ರಗಳು ೧೦೫

## ಅಧ್ಯಾಯ ೧

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ಮಹತ್ವ

"**ಕ**ರ್ನಾಟಕದಲ್ಲಿ ಚಿತ್ರಕಲೆ ಸಾವಿರಾರು ವರ್ಷಗಳ ಹಿಂದೆಯೇ ಜನ್ಮ ತಾಳಿದೆ. ಶಿಲಾಯುಗದಿಂದ ಹಿಡಿದು ಇಂದಿನವರೆಗೆ ಆದಿವಾಸಿಗಳು, ಬುಡಕಟ್ಟು ಜನರು, ಈ ಚಿತ್ರಕಲೆಯ ಮೂಲಕ ತಮ್ಮ ಬದುಕನ್ನು ತರೆದಿಟ್ಟುಕೊಂಡು ಬಂದಿರುವುದಾಗಿದೆ. ಉದಾಹರಣೆಗೆ ಇಂದಿಗೂ ಕರ್ನಾಟಕದ ಅನೇಕ ಪ್ರದೇಶಗಳ ಬುಡಕಟ್ಟು ಮನೆಗಳಲ್ಲಿ ಗುಹಾಲಯದ ಚಿತ್ರಗಳು ಕಾಣುತ್ತೇವೆ. ಹೀಗೆ ಜನಪದ ಪರಂಪರೆಯ ಚಿತ್ರಕಲೆಯ ಬೆಳವಣಿಗೆಯಂತೆ ಐತಿಹಾಸಿಕ ಶಿಷ್ಟಪರಂಪರೆಯ ಚಿತ್ರಕಲೆಗಳು ಅಜಂತಾ, ಎಲ್ಲೋರಾ, ಬಾದಾಮಿ, ಲೇಪಾಕ್ಷಿ, ಹಂಪೆ ಹೀಗೆ ನೂರಾರು ಐತಿಹಾಸಿಕ ಸ್ಥಳಗಳಲ್ಲಿ ಕಂಡುಬರುತ್ತವೆ. ಹಾಗೂ ದೇವಾಲಯ, ಮನೆ, ಅರಮನೆ, ಮಠ, ಮಸೀದಿ, ಚರ್ಚ್‌ಗಳಲ್ಲಿ ಇಂದಿಗೂ ಉಳಿದುಕೊಂಡು ಬಂದಿರುವುದು ನೋಡಬಹುದಾಗಿದೆ. ಹೀಗಾಗಿ ಚಿತ್ರಕಲೆಯ ಮೂಲಕ ಕರ್ನಾಟಕದ ಸಾಂಸ್ಕೃತಿಕ ಲೋಕ ತುಂಬಾ ಶ್ರೀಮಂತವಾಗಿ ಅನಾವರಣಗೊಂಡಿದೆ. ನಮ್ಮ ನಾಡಿನ ಸಾಂಸ್ಕೃತಿಕ ಪರಂಪರೆಯನ್ನು ಗಮನಿಸಿದಾಗ ಚಿತ್ರಕಲೆಯ ಇತಿಹಾಸ ನಿಜಕ್ಕೂ ಅನನ್ಯವಾದುದಾಗಿದೆ. "ಒಂದು ಚಿತ್ರ ಸಾವಿರ ಪದಗಳಿಗೆ ಸಮಾನ" ಎನ್ನುವ ಗಾದೆ ಜನ ಸಾಮಾನ್ಯರಲ್ಲಿ ಇದ್ದರೂ ಇಂತಹ ಚಿತ್ರಕಲೆಯ ನಿರ್ಮಾತೃಗಳು, ಕಲಾ ಸೃಷ್ಟಿಕಾರರು ಎಲೆ ಮರೆಯ ಕಾಯಿಯಂತೆ ಮರೆಯಾಗಿಯೇ ಉಳಿದಿದ್ದಾರೆ. ಅಂಥವರ ಕುರಿತು ಇಂದು ಅಧ್ಯಯನಗಳು ನಡೆಯಬೇಕಾಗಿದೆ.[೧]

೧. ಡಾ. ಮೋಹನರಾವ್ ಪಂಚಾಳ : ಚಿತ್ರಕಲಾವಿದ ಡಾ. ಎಸ್.ಎಂ. ಪಂಡಿತ್ : ಒಂದು ಅಧ್ಯಯನ ಪಿಎಚ್.ಡಿ. ಮಹಾಪ್ರಬಂಧ, ಪು.೨

ಯಾವುದೇ ಸಂಸ್ಕೃತಿಯನ್ನು ಅಧ್ಯಯನ ಮಾಡುವಾಗ ಸಂಸ್ಕೃತಿಯ ಬಹುಮುಖ್ಯ ಅಂಗವಾಗಿರುವ ಲಲಿತಕಲೆಗಳನ್ನು ಪ್ರಮುಖವಾಗಿ ಪರಿಗಣಿಸಬೇಕಾಗುತ್ತದೆ. ಕರ್ನಾಟಕವು ಭಾಷೆ ವಿಭಿನ್ನ ಸಂಸ್ಕೃತಿ ಕಲೆಗಳ ತವರೂರಾಗಿ ಪ್ರಾಚೀನ ಕಾಲದಿಂದಲೂ ಬೆಳೆದುಕೊಂಡು ಬಂದಿದೆ. ಮಾನವ ವಿಕಸನದ ಹಲವು ಮಜಲುಗಳನ್ನು ಕಂಡಿರುವ ಕರ್ನಾಟಕವು ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ, ಧರ್ಮ ಪರಂಪರೆ ಹಾಗೂ ಲಲಿತಕಲೆಗಳ ಜೀವಂತಿಕೆಯಿಂದ ಹಲವಾರು ಕಲಾವಿದರ ಹುಟ್ಟಿಗೆ ಕಾರಣವಾಗಿದೆ. ಇವರಲ್ಲಿ ಶಿಲ್ಪಿಗಳು, ಸಂಗೀತಗಾರರು, ನೃತ್ಯ, ನಾಟಕ, ಚಿತ್ರಕಲೆ ಹೀಗೆ ಹತ್ತಾರು ಕ್ಷೇತ್ರಗಳಲ್ಲಿ ತಮ್ಮದೇ ಆದ ವಿಶಿಷ್ಟ ವ್ಯಕ್ತಿತ್ವದಿಂದ ರಾಜ್ಯ, ರಾಷ್ಟ್ರ, ಅಂತರಾಷ್ಟ್ರೀಯ ಮಟ್ಟದಲ್ಲಿ ಹೆಸರು ಮಾಡಿದ ಅನೇಕ ಕಲಾವಿದರಲ್ಲಿ ಚಿತ್ರಕಾರ ರುಮಾಲೆ ಚನ್ನಬಸಪ್ಪನವರು ಒಬ್ಬರು. ಅವರ ಬದುಕು ನಡೆದ ಹಾದಿ ಕಲಾಸಾಧನೆಯ ಹಿಂದಿನ ಪರಿಶ್ರಮ, ನಾಡು ನುಡಿಗೆ ನೀಡಿದ ಅಮೂಲ್ಯ ಕೊಡುಗೆ ಅಪಾರ. ಅಂಥವರ ಅಧ್ಯಯನ ಸಮಾಜಕ್ಕೊಂದು ದಾರಿ ದೀಪವಾಗಿದೆ.

ಮುಂದಿನ ಪೀಳಿಗೆಗೆ ಈ ಕಲೆ, ಕಲಾವಿದರ ಸಾಧನೆಯನ್ನು ಪರಿಚಯಿಸುವ ದಾಖಲೆಗಳು ತುಂಬಾ ಅಪರೂಪವಾಗಿದೆ. ಸಾಂಸ್ಕೃತಿಕ ಇತಿಹಾಸ ರಚನೆಯ ಸಂದರ್ಭದಲ್ಲಿ ಈ ದಾಖಲೆಗಳು ಮಹತ್ವದ ಆಕರಗಳಾಗುತ್ತವೆ. ಪ್ರಸ್ತುತ ಸ್ಥಿತಿಯಲ್ಲಿ ಕಲೆ ಕಲಾವಿದರ ಕುರಿತಾದ ವಿವರ ಮತ್ತು ಅವರ ಭಾವನಾತ್ಮಕ ತುಡಿತಗಳನ್ನು ಹಾಗೂ ಪ್ರಕಟಿತ ವಿಮರ್ಶೆಗಳನ್ನು ಇಂದು ನಾವು ದಾಖಲಿಸುವ ಕಾರ್ಯ ಮಾಡಬೇಕಾಗಿದೆ. ನಾಡಿನ ಉದ್ದಗಲಕ್ಕೂ ನಮ್ಮ ಕಲಾವಿದರ ಕಲಾ ಸಾಧನೆ, ಕಲಾ ಜೀವನ, ಕ್ಷೇತ್ರ ಸೇವೆ ಇವು ಎಷ್ಟೋ ಸಲ ನಮ್ಮ ಗಮನಕ್ಕೆ ಬಾರದೆ ಮುಸುಕಾಗಿ ಹೋಗಿವೆ. ಆದರೆ ಅವು ನಿರಂತರವಾಗಿ ಮುಂದಿನ ಜನಾಂಗಕ್ಕೆ ಪರಿಚಯವಾಗಬೇಕಾದರೆ ಕಲಾವಿದರ ಅಧ್ಯಯನ ಕ್ರಮವನ್ನು ಹಾಗೂ ಅವರ ಸೃಜನಶೀಲ ರಚನಾ ವಿಧಾನಗಳನ್ನು ಇಂದಿನ ಯುವ ಪೀಳಿಗೆಗೆ ಪರಿಚಯಿಸುವುದು ತೀರಾ ಅವಶ್ಯಕವಾಗಿದೆ.

ಯಾವುದೇ ರಾಷ್ಟ್ರದ ಸಾಂಸ್ಕೃತಿಕ ಶ್ರೀಮಂತಿಕೆಗೆ ಕಲಾ ಸೇವೆಯು ಮಹತ್ವವಾದದ್ದು. ಅದು ಒಂದು ದೃಷ್ಟಿಕೋನದಿಂದ ಸಾಧ್ಯವಾಗುತ್ತಿರುತ್ತದೆ. ಆದರೆ ಸಾಂಸ್ಕೃತಿಕವಾದ ಎಲ್ಲಾ ಕ್ಷೇತ್ರಗಳಲ್ಲಿ ತನನ್ನು ತಾನು ತೊಡಗಿಸಿಕೊಂಡು ಸಾಂಸ್ಕೃತಿಕ ಪಲ್ಲಟಗಳಿಗೆ ಕಾರಣವಾಗಿರುವಂತವರು ತೀರಾ ವಿರಳ. ಅಂತಹ ವಿರಳ ವ್ಯಕ್ತಿಗಳ ಸಾಲಿನಲ್ಲಿ ಸೇರಿಕೊಳ್ಳುವ ಅಪರೂಪದ ವ್ಯಕ್ತಿ ಎಂದರೆ 'ರುಮಾಲೆ ಚನ್ನಬಸವಯ್ಯ'ನವರು ಅವರು ೨೦ನೇ ಶತಮಾನದಲ್ಲಿ ಸಮೃದ್ಧ ಕರ್ನಾಟಕವನ್ನು ಕಟ್ಟುವಲ್ಲಿ ಅತ್ಯಂತ ಶ್ರಮವಹಿಸಿದ ದೀಮಂತ ಪ್ರತಿಭಾವಂತರಾಗಿದ್ದಾರೆ.

ಮೂಲತಃ ಸ್ವಾತಂತ್ರ್ಯ ಹೋರಾಟಗಾರರಾದ ರುಮಾಲೆ ಚನ್ನಬಸವಯ್ಯನವರು ಕಲೆಯ ಮೂಲಕ ಸಾಹಿತ್ಯದ ಮೂಲಕ, ರಾಜಕೀಯದ ಮೂಲಕ ಹಲಾವರು ಸಾಂಸ್ಕೃತಿಕ ಪಲ್ಲಟಗಳಿಗೆ ಕಾರಣಕರ್ತರಾದ

ರುಮಾಲೆ ಚನ್ನಬಸವಯ್ಯನವರು ಸಾಂಸ್ಕೃತಿಕ ಸ್ಥಿತ್ಯಂತರದ ಹರಿಕಾರರಾಗಿದ್ದಾರೆ. ಅಲ್ಲದೆ ಕರ್ನಾಟಕದ ಕಲಾ ಚರಿತ್ರೆಯಲ್ಲಿ ಇವರು ಅಡಿಗಲ್ಲು. ಸಾಂಸ್ಕೃತಿಕ ಚರಿತ್ರೆಯಲ್ಲಿ ಒಂದು ಮೈಲಿಗಲ್ಲು. ಇಂತಹ ವಿದ್ವತ್ ಪೂರ್ಣ ಗಾಂಧೀವಾದಿಯ ಕುರಿತು ಅಧ್ಯಯನ ಮಾಡಿ ಅವರ ಸಮಸ್ತ ಜೀವನದ ಮೇಲೆ ಬೆಳಕು ಬೀರುವುದೇ ಅತ್ಯಂತ ಮಹತ್ತರವಾದದ್ದು. ರುಮಾಲೆಯವರು ಚಿತ್ರಕಲಾ ಕ್ಷೇತ್ರಕ್ಕೆ ನೀಡಿರುವ ಕೊಡುಗೆಯನ್ನು ದಾಖಲೀಕರಣ ಮಾಡುವ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## ಅಧ್ಯಯನದ ಉದ್ದೇಶ

"ಕಲೆಯು ಮಾನವನ ಜೀವನದ ಅವಿಭಾಜ್ಯ ಅಂಗವಾಗಿದೆ. ಮನುಷ್ಯನ ಜೀವನವನ್ನು ಪರಿವರ್ತಿಸುವ ಕೆಲಸವನ್ನು ಮಾಡಿದಲ್ಲದೆ ಕೆಲವೊಬ್ಬರು ಕಲೆಗಾಗಿಯೇ ತಮ್ಮ ಜೀವನವನ್ನು ಮುಡುಪಾಗಿಟ್ಟಿರುವ ಘಟನೆಗಳು ಇತಿಹಾಸದಲ್ಲಿ ನಡೆದಿದೆ."[೨] ಈ ರೀತಿಯಲ್ಲಿ ರುಮಾಲೆ ಚನ್ನಬಸವಯ್ಯ ನವರು. ದೇಶಕ್ಕಾಗಿ, ಸ್ವಾತಂತ್ರ್ಯಕ್ಕಾಗಿ ಹಾಗೂ ಕಲೆಗಾಗಿಯೇ ತಮ್ಮನ್ನು ಅರ್ಪಿಸಿಕೊಂಡವರು, ಮಾತ್ರವಲ್ಲದೆ ಅವರು ಹಲವಾರು ಕ್ಷೇತ್ರಗಳಲ್ಲಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಖ್ಯಾತಿಯನ್ನು ಪಡೆದವರಾಗಿದ್ದಾರೆ. ಇಂಪ್ರೆಸ್‌ಇಜಂ ಶೈಲಿಯ ಚಿತ್ರ ಇದ್ದಲ್ಲಿ ಖ್ಯಾತ ಪಾಶ್ಚಾತ್ಯ ಕಲಾವಿದನಾದ ವ್ಯಾನ್‌ಗಾಗೊನನ್ನು ಮೀರಿಸಬಲ್ಲ ಕಲಾವಂತಿಕೆ ಇದೆ. ಅವರ ಚಿತ್ರಕೃತಿಗಳು ಸಾಮಾನ್ಯ ನೋಡುಗರಿಂದ ಹಿಡಿದು ಪ್ರಬುದ್ಧ ವಿಮರ್ಶಕರವರೆಗೆ ಎಲ್ಲರ ಮೆಚ್ಚುಗೆಗೆ ಪಾತ್ರವಾಗಿದೆ. ವ್ಯಾನ್‌ಗಾಗೂ ನಂತರದ ಕಲಾವಿದರಲ್ಲಿ 'ಭಾರತೀಯ ವ್ಯಾನ್‌ಗಾಗೂ' ಎಂಬ ಖ್ಯಾತಿಯನ್ನು ಪಡೆದು ಬಹಳಷ್ಟು ಜನಪ್ರಿಯತೆ ಯನ್ನು ಗಳಿಸಿದ ಧೀಮಂತ ವ್ಯಕ್ತಿ ರುಮಾಲೆ ಚನ್ನಬಸವಯ್ಯನವರಾಗಿದ್ದಾರೆ.

ಹೀಗೆ ಕಲಾಕ್ಷೇತ್ರಕ್ಕೆ ಅಮೂಲ್ಯ ಕೊಡುಗೆ ನೀಡಿದ ರುಮಾಲೆ ಚನ್ನಬಸವಯ್ಯನವರ ಬದುಕನ್ನು ಕಟ್ಟಿಕೊಡುವ ಪ್ರಮುಖ ಉದ್ದೇಶ ಇಲ್ಲಿದೆ. ಮತ್ತು ಅವರ ಕಲಾ ಸಾಧನೆ, ವಿಶೇಷವಾಗಿ ಚಿತ್ರಕಲಾ ಕ್ಷೇತ್ರಕ್ಕೆ ನೀಡಿದ ಕಲಾಕೃತಿಗಳನ್ನು ವಿಶ್ಲೇಷಿಸುವುದು ಅವರ ವೈವಿಧ್ಯಮಯ ಕಲಾಕೃತಿಗಳಲ್ಲ ನಡೆದ ವಿಶಿಷ್ಟ ಕಲಾ ಪ್ರಯೋಗಗಳನ್ನು ಕಂಡುಕೊಳ್ಳುವುದು ಸಹ ಇಲ್ಲಿನ ಅಧ್ಯಯನದ ಪ್ರಮುಖ ಉದ್ದೇಶ ವಾಗಿದೆ.

ರುಮಾಲೆಯವರ ಕಲಾಕೃತಿಗಳು ಮುಂದಿನ ಪೀಳಿಗೆಗೆ ದಾಖಲಿಸುವ ಹಾಗೂ ಅವರ ಕಲಾಕೃತಿಯ ಮೇಲಾದ ಪ್ರಭಾವ, ಪ್ರೇರಣೆ, ತಂತ್ರಗಾರಿಕೆ ಮುಂತಾದ ಅಂಶಗಳನ್ನು ಗುರುತಿಸುವ ಉದ್ದೇಶವು ಇಲ್ಲಿದೆ. ರುಮಾಲೆಯವರ ಒಟ್ಟಾರೆ ಬದುಕಿನ ವಿವಿಧ ಮಜಲುಗಳನ್ನು ಮತ್ತು ಕಲಾಕೃತಿಗಳ ಮೂಲಕ

---

೨. ಡಾ. ಮೋಹನರಾವ್ ಪಂಚಾಳ ಚಿತ್ರಕಲಾವಿದ ಡಾ. ಎಸ್.ಎಂ. ಪಂಡಿತ್ ಒಂದು ಅಧ್ಯಯನ ಪಿಎಚ್.ಡಿ. ಮಹಾಪ್ರಬಂಧ, ಪು.೨-೩

ಕನ್ನಡದ ಬದುಕನ್ನು ಹೇಗೆ ಕಲಾಪ್ರಪಂಚಕ್ಕೆ ನೀಡಿದ್ದಾರೆ ಎಂಬಂತಹ ಅಂಶಗಳ ಪ್ರಸ್ತುತ ಅಧ್ಯಯನ ಗಮನಹರಿಸಿದೆ.

ಅವರ ಕಲಾಕೃತಿಗಳಿಗೆ ಭಾರತದಲ್ಲಿ ಅಷ್ಟೇ ಅಲ್ಲ, ವಿದೇಶಗಳಲ್ಲಿಯೂ ಅಪಾರ ಜನಮನ್ನಣೆಯನ್ನು ಲಭಿಸಿದೆ. ಅವರು ಹೆಚ್ಚು ಪ್ರಕೃತಿ ಚಿತ್ರಗಳನ್ನು ಮತ್ತು ವ್ಯಕ್ತಿ ಚಿತ್ರಗಳನ್ನು ರಚಿಸಿ ಸೃಜನಶೀಲ ಅಭಿವ್ಯಕ್ತಿಯನ್ನು ಮೆರೆದಿದ್ದಾರೆ. ರುಮಾಲೆ ಚನ್ನಬಸವಯ್ಯನವರ ಜೀವನ ಹಾಗೂ ಕಲಾಕೃತಿಗಳ ಅಧ್ಯಯನ ಮಾಡುವುದು ಈ ಸಂಪ್ರಬಂಧದ ಉದ್ದೇಶವಾಗಿದೆ.

**ರುಮಾಲೆ ಚನ್ನಬಸವಯ್ಯನವರ ಕುರಿತು ಇದುವರೆಗೆ ನಡೆದ ಅಧ್ಯಯನ**

ಕರ್ನಾಟಕದ ಹಿರಿಯ ಕಲಾವಿದರಾದ ಶ್ರೀ ರುಮಾಲೆ ಚನ್ನಬಸವಯ್ಯನವರ ಜೀವನ, ಕಲಾಕೃತಿಗಳ ಅಧ್ಯಯನ ಕನ್ನಡ ಭಾಷೆಯಲ್ಲಿ ಇದೇ ಮೊದಲ ಬಾರಿಗೆ ಕೈಗೊಳ್ಳಲಾಗಿದೆ. ರುಮಾಲೆ ಅವರನ್ನು ಕುರಿತು ಈವರೆಗೆ ಒಂದೇ ಒಂದು 'ರುಮಾಲೆ ಚನ್ನಬಸವಯ್ಯ' ಎಂಬ ಚಿಕ್ಕ ಪುಸ್ತಕವನ್ನು ಕರ್ನಾಟಕ ಲಲಿತಕಲಾ ಅಕಾಡೆಮಿಯ ವತಿಯಿಂದ ಪ್ರಕಟಪಡಿಸಲಾಗಿದೆ. ಇದರಲ್ಲಿ ಅವರ ಜೀವನದ ಮೇಲು ನೋಟದ ಕೆಲವು ವಿವರಗಳು ಕಂಡುಬರುತ್ತವೆ.

ರುಮಾಲೆಯವರನ್ನು ಕುರಿತ ಕೆಲವು ಲೇಖನಗಳು ಇಂತಿವೆ. 'ಕರ್ನಾಟಕ ಸ್ಮರಣ ಸಂಚಿಕೆ', 'ಕರ್ನಾಟಕ ರಾಜ್ಯ ಗೆಝೇಟಿಯರ್', ಅಶೋಕ ಟಿ.ಪಿ. ಅಕ್ಕಿ ಅವರ 'ಕಲಾ ಚರಿತ್ರೆ', 'ಕರ್ನಾಟಕ ಲಲಿತಕಲಾ ಅಕಾಡೆಮಿಯ ಪ್ರಶಸ್ತಿ ಪಡೆದ ಕಲಾವಿದರು', 'ಬೆಂಗಳೂರು ಜಿಲ್ಲಾ ಗೆಝೇಟಿಯರ್', 'ತರಂಗ ವಾರಪತ್ರಿಕೆ'ಯಲ್ಲಿ, ದಿನಪತ್ರಿಕೆಗಳಾದ 'ಇಂಡಿಯನ್ ಎಕ್ಸ್‌ಪ್ರೆಸ್', 'ಡೆಕ್ಕನ್ ಹೆರಾಲ್ಡ್' ೨೬.೦೧.೧೯೭೭, 'ರುಮಾಲೆ ಆರ್ಟ್ಸ್ ಗ್ಯಾಲರಿ ಕೆಟ್‌ಲಾಗ್'ಗಳಲ್ಲಿ ರುಮಾಲೆಯವರ ಕುರಿತು ಸಂಕ್ಷಿಪ್ತ ಮಾಹಿತಿಗಳನ್ನು ಕಾಣುತ್ತೇವೆ. ಆದರೆ ಅವರ ಸಮಗ್ರ ಕಲಾ ಬದುಕನ್ನು ಕಟ್ಟಿಕೊಡುವ ಅಧ್ಯಯನವಾಗಿಲ್ಲ ದಿರುವುದನ್ನು ಗಮನಿಸಿ ಪ್ರಸ್ತುತ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

ರುಮಾಲೆ ಚನ್ನಬಸವಯ್ಯನವರು ಸೆಪ್ಟೆಂಬರ್ ೧೯೧೦ ರಂದು ದೊಡ್ಡಬಳ್ಳಾಪುರದಲ್ಲಿ ರುಮಾಲೆ ಎಂಬ ಮನೆತನದಲ್ಲಿ ಜನ್ಮತಾಳಿದರು. ಬಾಲ್ಯದಿಂದಲೇ ಅವರ ಮೇಲೆ ಸುತ್ತಮುತ್ತಲಿನ ಪರಿಸರವು ಪ್ರಭಾವ ಬೀರಿ ಮುಂದೆ ಅವರೊಬ್ಬ ದೊಡ್ಡ ಕಲಾವಿದರಾಗಿ ರೂಪಗೊಳ್ಳುವಂತಾಗಿದೆ. ಅವರ ಬಾಲ್ಯ ಜೀವನವು ಕಲಾವಂತಿಕೆಯಿಂದ ಕೂಡಿರಲು ಅನೇಕ ಮಹಾನ್ ವ್ಯಕ್ತಿಗಳ ಪ್ರಭಾವವು ಅವರ ಮೇಲಾಗಿದೆ. ಈ ರೀತಿಯಲ್ಲಿ ರುಮಾಲೆಯವರ ಸೇವಾದಳ, ಸ್ವತಂತ್ರ್ಯ ಹೋರಾಟ, ಸಮಾಜಸೇವೆ, ಕಲಾಬದುಕು ಹೀಗೆ ಅವರ ಸಮಗ್ರ ಬದುಕನ್ನು ರೂಪಿಸುವ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಲಾಗಿದೆ.

ರುಮಾಲೆ ಚನ್ನಬಸವಯ್ಯನವರು ಬೆಂಗಳೂರುನಲ್ಲಿ ಇರುವ ಕಲಾಮಂದಿರ ಕಲಾ ಶಾಲೆಯಲ್ಲಿ ಶಿಕ್ಷಣ ಪಡೆಯುತ್ತಾರೆ. ನಂತರ ಚಾಮರಾಜೇಂದ್ರ ತಾಂತ್ರಿಕ ಶಾಲೆಯಲ್ಲಿ ಕಲಾ ಶಿಕ್ಷಣವನ್ನು ಪೂರೈಸಿದರು. ಇದರ ಫಲವಾಗಿ ಅಲ್ಲಿನ ಪರಿಸರ, ಗುರುಗಳ ಚಿಂತನಕ್ರಮ, ಪಠ್ಯಕ್ರಮ, ಕಲಾ ವಾತಾವರಣ ಮುಂತಾದವುಗಳು ಸಹಜವಾಗಿ ಅವರ ಮೇಲೆ ದಟ್ಟಪ್ರಭಾವ ಬೀರಿರುವುದು ಕಂಡುಬರುತ್ತದೆ. ಹೀಗೆ ಈ ಪ್ರಮುಖ ಹಂತಗಳಲ್ಲಿ ಬಿಚ್ಚಿಕೊಂಡ ರುಮಾಲೆಯವರ ಕಲಾ ಬದುಕನ್ನು ವಿಂಗಡಿಸಿಕೊಂಡು ಅಧ್ಯಯನ ಕೈಗೊಳ್ಳಲಾಗಿದೆ.

## ಚಿತ್ರಕಲಾ ಕ್ಷೇತ್ರದಲ್ಲಿ ಇಲ್ಲಿಯವರೆಗೆ ನಡೆದ ಅಧ್ಯಯನಗಳು

ಕರ್ನಾಟಕದ ಸಂದರ್ಭದ ಚಿತ್ರಕಲಾ ಕ್ಷೇತ್ರದಲ್ಲಿ ಹೆಚ್ಚಿನ ಸಂಶೋಧನಾ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬಹುದು. ಕಾರಣ ನಮ್ಮ ಕಲಾವಿದರುಗಳು ಸಾಹಿತ್ಯದ ಕಡೆ ಹೆಚ್ಚು ಗಮನಹರಿಸುತ್ತಿರಲಿಲ್ಲ. ಕಲಾವಿದರು ಹೇಳುತ್ತಿದ್ದುದೆ ನಾವು ಏನನ್ನೂ ಹೇಳಲು ಹೊರಟಿದ್ದೇವೊ ಅದನ್ನೇ ನಮ್ಮ ಕಲಾಕೃತಿಗಳು ಹೇಳುತ್ತವೆ. ನಾವು ಮಾತನಾಡುವುದನ್ನು ನಮ್ಮ ಕಲಾಕೃತಿಗಳು ಮಾತನಾಡುತ್ತವೆ. ಕಲಾಕೃತಿಯ ಬಣ್ಣ, ರೇಖೆ, ಲಾಲಿತ್ಯಗಳೆ ಸಾಹಿತ್ಯ ಎಂಬ ಒಂದು ಮೂಢನಂಬಿಕೆಯಲ್ಲಿ ಇದ್ದರು. ಇವು ಒಂದು ಚಿತ್ರಕಲೆಯ ಕ್ಷೇತ್ರವು ಬರೀ ಪ್ರೌಢಶಾಲಾ ಪರೀಕ್ಷಾಮಂಡಳಿಗಷ್ಟೇ ಸೀಮಿತವಾಗಿತ್ತು. ಅದೊಂದು ವಿಶ್ವವಿದ್ಯಾಲಯದ ಮಟ್ಟಕ್ಕೆ ಬಂದಿರಲಿಲ್ಲ.

ನಮ್ಮ ಕಲಾವಿದರುಗಳಿಗೆ ಸಂಶೋಧನೆ ಎಂದರೇನು ಎಂಬ ಅದರ ಅರಿವು ಕೂಡ ಇವರಿಗೆ ಇರಲಿಲ್ಲ. ನಾವು ನಮ್ಮ ಕ್ಷೇತ್ರದ ಬಗ್ಗೆ ಏನನಾದರೂ ಉಳಿಸಿಕೊಡಬೇಕು, ನಾಳೆ ಅದೊಂದು ದಾಖಲಿಕರಣವಾಗಿ ಉಳಿದು ಮುಂದಿನ ಪೀಳಿಗೆಗೆ ಅದು ಮಾರ್ಗದರ್ಶನ ವಾಗಬೇಕೆಂಬ ಯಾವುದೇ ರೀತಿಯ ಅರಿವು ನಮ್ಮ ಕಲಾವಿದರಲ್ಲಿ ಇರಲಿಲ್ಲ. ಇತರೇ ಕ್ಷೇತ್ರದಂತೆ ನಮ್ಮ ಕ್ಷೇತ್ರವು ಬೆಳೆಯಬೇಕು, ನಾವು ಕೂಡ ಅವರಿಗಿಂತ ಏನು ಕಡಿಮೆ ಇಲ್ಲವೆಂಬಂತೆ ೧೯೯೦ರ ದಶಕದಿಂದ ವಿಶ್ವವಿದ್ಯಾಲಯದ ಮಟ್ಟದಲ್ಲಿ ಸ್ನಾತಕೋತ್ತರ ಪದವಿಗಳು ಪ್ರಾರಂಭವಾಗಿ ಅದರಲ್ಲಿ ಅಂತಿಮ ವರ್ಷದಲ್ಲಿ ಒಂದು ಸಂಶೋಧನಾ ಕಿರುಪ್ರಬಂಧವನ್ನು ಮಂಡನೆ ಮಾಡುವ ನಿಯಮವನ್ನು ತಂದು ಸಂಶೋಧನೆಯನ್ನು ಹುಟ್ಟು ಹಾಕಿದರು. ಇದಾದನಂತರ ಎಂ.ಫಿಲ್ ಕಿರುಪ್ರಬಂಧ, ಪಿಎಚ್.ಡಿ. ಮಹಾಪ್ರಬಂಧಗಳು ಪ್ರಾರಂಭಗೊಂಡು ಈಗ ಒಂದು ಉನ್ನತ ಮಟ್ಟದಲ್ಲಿ ನಮ್ಮ ಚಿತ್ರಕಲಾ ಕ್ಷೇತ್ರವು ಬೆಳೆಯುತ್ತಿದೆ. ಇದಕ್ಕೆ ಕಾರಣಕರ್ತರು ಡಾ ಎಸ್.ಸಿ. ಪಾಟೀಲ ಅವರು ಎಂದಾರೆ ತಪ್ಪಾಗಲಾರದು. ಹಾಗಾಗೀ ವಿಶ್ವವಿದ್ಯಾಲಯದ ಮಟ್ಟದಲ್ಲಿ ಚಿತ್ರಕಲೆಗಳ ಕುರಿತಾದ ಅಧ್ಯಯನವು ೧೯೯೦ರ ದಶಕದಿಂದ ಕರ್ನಾಟಕದಲ್ಲಿ ನಡೆದ ದೃಶ್ಯಕಲಾ ಅಧ್ಯಯನಗಳನ್ನು ಸಮೀಕ್ಷಿಸಿ, ಸ್ಥೂಲವಾದ ವಿವರವನ್ನು ಈ ಕೆಳಗೆ ಕೊಡಲಾಗಿದೆ.

**ಪಿಹೆಚ್.ಡಿ. ಮಹಾಪ್ರಬಂಧಗಳು**

೧೯೮೦ರ ದಶಕದಿಂದ ಕರ್ನಾಟಕದ ದೃಶ್ಯಕಲಾ ಕ್ಷೇತ್ರದಲ್ಲಿ ಮೊದಲ ಬಾರಿಗೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆ ಕುರಿತು ಸಂಶೋಧನಾತ್ಮಕ ಅಧ್ಯಯನ ಪ್ರಾರಂಭಗೊಂಡಿರುವುದು ಕಂಡುಬರುತ್ತದೆ. ಡಾ.ಎಸ್.ಸಿ.ಪಾಟೀಲರು *೧೯೮೩*ರಲ್ಲಿ ಕರ್ನಾಟಕ ವಿ.ವಿ.ಯ ಸ್ನಾತಕೋತ್ತರ ಶಿಕ್ಷಣ ವಿಭಾಗಕ್ಕೆ ಮಂಡಿಸಿದ **ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ: ಒಂದು ಅಧ್ಯಯನ** ಎಂಬ ಸಂಶೋಧನ ಕಿರು ಪ್ರಬಂಧವು ಈ ಕ್ಷೇತ್ರದ ಪ್ರಥಮ ಅಧ್ಯಯನದ ಕಾರ್ಯವೆಂದು ದಾಖಲಾಗಿದೆ. *೧೯೮೭*ರಲ್ಲಿ ಡಾ.ಬಿ.ಕೆ.ಹಿರೇಮಠರವರು **ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ** ಎಂಬ ಪಿಹೆಚ್.ಡಿ. ಮಹಾಪ್ರಬಂಧದಲ್ಲಿ ಹಸ್ತಪ್ರತಿ ಚಿತ್ರಕಲೆ ಕುರಿತಂತೆ ಕೆಲವು ಅಧ್ಯಾಯಗಳನ್ನು ಮೀಸಲಾಗಿಟ್ಟು ಅಧ್ಯಯನ ಮಾಡಿದ್ದಾರೆ. ಇದರ ನಂತರ *೧೯೯೧*ರಲ್ಲಿ ಕರ್ನಾಟಕದಲ್ಲಿಜನಪದ ಚಿತ್ರಕಲೆಯನ್ನೇ ಸಂಶೋಧನೆಯ ಮುಖ್ಯ ವಿಷಯವನ್ನಾಗಿಟ್ಟಕೊಂಡು ಕರ್ನಾಟಕ ವಿ.ವಿ.ಗೆ ಮಂಡಿಸಿದ ಪಿಹೆಚ್.ಡಿ. ಮಹಾಪ್ರಬಂಧ **ಕರ್ನಾಟಕದ ಜನಪದ ಚಿತ್ರಕಲೆ** ಈ ಮಹಾಪ್ರಬಂಧವನ್ನು ಡಾ.ಎಸ್.ಸಿ.ಪಾಟೀಲರು ಸಿದ್ಧಪಡಿಸಿದ್ದು ದೃಶ್ಯಕಲಾ ಕ್ಷೇತ್ರದ ಮೊದಲ ಅಧ್ಯಯನ ಎಂಬ ಅಗ್ಗಳಿಕೆಗೆ ಪಾತ್ರವಾಗಿದೆ. ನಂತರದ ದಿನಗಳಲ್ಲಿ *೧೯೯೫*ರಲ್ಲಿ ಡಾ. ಅ.ಲ.ನರಸಿಂಹನ್ ಅವರ **ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು,** *೧೯೯೭*ರಲ್ಲಿ ಡಾ.ಸಂಪದಾ ಭಟ್ ಅವರ **ಹಿಂದೂಸ್ತಾನಿ ಸಂಗೀತ ಹಾಗೂ ರಾಗಮಾಲ ಚಿತ್ರಗಳು,** ಡಾ.ಪುಷ್ಪಾ ದ್ರಾವಿಡ ಅವರ **ಅನಿವಾಸಿ ಭಾರತೀಯ ಕಲಾವಿದ ದಿ.ನಿಕೋಲಸ್ ರೋರಿಕ ಜೀವನ ಮತ್ತು ಕಲಾಕೃತಿಗಳು.** *೨೦೦೧* ರಲ್ಲಿ ಡಾ.ಯಾದಪ್ಪ ಪರದೇಶಿ ಅವರ **ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಒಂದು ಅಧ್ಯಯನ,** *೨೦೦೨*ರಲ್ಲಿ ಡಾ.ಶಿವಾನಂದ ಬಂಟನೂರು ಅವರ **ಕರ್ನಾಟಕದ ಜನಪದ ಶಿಲ್ಪಕಲೆ, ಒಂದು ಅಧ್ಯಯನ,** ಡಾ.ಗಿರೀಶಕುಮಾರ ಅವರ **ಬುಡಕಟ್ಟು ಚಿತ್ರಕಲೆ,** ಡಾ.ಲಕ್ಷ್ಮಿದೇವಿ ಗವಾಯಿ ಅವರ ಕಲಾವಿದ **ಎಂ.ಎ.ಚೆಟ್ಟಿಯವರ ಜೀವನ, ಕಲಾಕೃತಿಗಳು- ಒಂದು ಅಧ್ಯಯನ,** ಶರಣಪ್ಪ ಕೋಲ್ಕಾರ ಅವರ **ಕೊಪ್ಪಳ-ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ,** ಡಾ.ಸೌಮ್ಯ ಅವರ **ಯಂತ್ರಾ ದಿ ವಿಜುವಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫೆರೆನ್ಸ್ ಟು ಕಾಂಟೆಂಪರರಿ ತಾಂತ್ರಿಕ ಆರ್ಟಿಸ್ಟ್,** ಡಾ.ಪ್ರಮೀಳಾ ಲೋಚನ ಅವರ **ಮೈಂಡ್ ಮ್ಯೂಜಿಕ್ ಅಂಡ್ ಕಲರ್ ಎಕ್ಸಪೋಜಿಸ್ ಅಂಡ್ ಡೆವೆಲಪ್‌ಮೆಂಟ್ ಆಫ್ ರಾಗಮಾಲಾ ಅಂಡ್ ಕಾಂಟೆಂಪರರಿ ಪೇಂಟಿಂಗ್,** *೨೦೦೩ರಲ್ಲಿ* ಡಾ.ವೀಣಾ ಶೇಖರ್ ಅವರ **ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ (೧೭೮೦-೧೮೨೦),** ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ ಅವರ **ಕಲಾವಿದ ಆರ್.ಎಮ್.ಹಡಪದ, ಒಂದು ಅಧ್ಯಯನ,** ಡಾ.ಎಸ್.ಸಿ.ಪಾಟೀಲ ಅವರ **ಎ ಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ ಎಜ್ಯುಕೇಶನ್ ಎಟ್ ಸ್ಕೂಲ್ ಲೆವೆಲ್ ಇನ್ ಕರ್ನಾಟಕ ಸ್ಟೇಟ್ ವಿತ್ ಸ್ಪೆಷಲ್ ರೆಫೆರೆನ್ಸ್ ಟು ಡ್ರಾಯಿಂಗ ಆಂಡ್ ಪೇಂಟಿಂಗ್,** *೨೦೦೪ರಲ್ಲಿ* ಡಾ.ವಿ.ಎಮ್.ಬಾಗಾಯತ್ ಅವರ **ಕರ್ನಾಟಕ ಮುಸ್ಲಿಂ ಅರಸರ ಕಾಲದ ಚಿತ್ರಕಲೆ, ಒಂದು ಅಧ್ಯಯನ(೧೪೦೦-೧೮೦೦),** ಡಾ.ಶಿವಕುಮಾರ ಜಿ.ಓ. ಅವರ **ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು,** ಡಾ.ಪಿ.ಗೌರೀಶ ಅವರ **ಮೈಸೂರು ಜಿಲ್ಲೆಯ ಜನಪದ ಚಿತ್ರಕಲೆ,** *೨೦೦೫ರಲ್ಲಿ* ಡಾ.ಶಶಿಕಲಾ ಹೂಗಾರ ಅವರ **ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ,** ಡಾ. ಶಿವಪ್ರಕಾಶ ತುಕ್ಕಣ್ಣವರ ಅವರ **ಕರ್ನಾಟಕ ರಥ ಶಿಲ್ಪಕಲೆ,** ಡಾ.ಎಚ್.ಎನ್.ಚಿತ್ರಗಾರ ಅವರ

**ಕರ್ನಾಟಕ ಹಸ್ತಪ್ರತಿ ಚಿತ್ರಕಲೆ,** ಡಾ. ಎಸ್.ವಿ. ವೆಂಕಟೇಶಯ್ಯ ಅವರ **ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು ಒಂದು ಅಧ್ಯಯನ,** *೨೦೦೬ರಲ್ಲಿ* ಡಾ. ವಿಶ್ವೇಶ್ವರಿ ತಿವಾರಿ ಅವರ **ರಂಗೋಲಿ ಕಲೆ,** *೨೦೦೭ರಲ್ಲಿ* ಡಾ. ಮಲ್ಲಿಕಾರ್ಜುನ ಬಾಗೋಡಿ ಇವರ **ಸುರಪುರ ಶೈಲಿಯ ಚಿತ್ರಕಲೆ ಒಂದು ಅಧ್ಯಯನ** ಮತ್ತು ಡಾ. ಗೀತಾಂಜಲಿ ಬಿ.ಆರ್. ಅವರ **ಐತಿಹಾಸಿಕ ದೀಪಸ್ತಂಭಗಳು,** ಡಾ. ರಾಠೋಡ್ ಅವರ **ಅನ್ವಯಿಕ ಕಲೆ, ಹಿಂದಿನಿಂದ ಇಂದಿನವರೆಗೆ,** *೨೦೦೮ರಲ್ಲಿ* ಮೋಹನ್ ಪಂಚಾಳ ಅವರ **ಕಲಾವಿದ ಎಸ್.ಎಮ್.ಪಂಡಿತ, ಬದುಕು ಮತ್ತು ಕಲೆ,** ವಿಶ್ವನಾಥ ಎ.ಎಸ್. ಅವರ **ಕರಾವಳಿ ಕರ್ನಾಟಕದ ಯಕ್ಷಗಾನ ಮುಖವರ್ಣಿಕೆ ಹಾಗೂ ವೇಷಭೂಷಣಗಳು'** *೨೦೦೯ರಲ್ಲಿ* ಡಾ. ಜಿ. ಲಕ್ಷ್ಮೀಪತಿ ಅವರ **ದಕ್ಷಿಣ ಕರ್ನಾಟಕದ ಜನಪದ ಶಿಲ್ಪಕಲೆ ಒಂದು ಅಧ್ಯಯನ** ಇವು ದೃಶ್ಯಕಲೆಗಳ ಕುರಿತು ಬಂದ ಪಿಹೆಚ್.ಡಿ. ಮಹಾಪ್ರಬಂಧಗಳು.

**ಡಿ.ಲಿಟ್. ಮಹಾಪ್ರಬಂಧಗಳು**

೨೦೦೫ರಲ್ಲಿ ಡಾ. ಆನಂದ ಪೂಜಾರ ಅವರ **ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆ,** ೨೦೦೫ರಲ್ಲಿ ಡಾ.ಡಿ.ಎ. ಉಪಾಧ್ಯ ಅವರ **ದೃಶ್ಯಕಲೆಗಳ ತೌಲನಿಕ ಅಧ್ಯಯನ,** ದೇವದಾಸ ಕಳಸದ ಅವರ **ರಂಗಭೂಮಿ ರಂಗಸಜ್ಜಿಕೆಯ ಕಲಾವಿನ್ಯಾಸ,** ಡಿ.ಲಿಟ್. ಮಹಾಪ್ರಬಂಧಗಳಾಗಿವೆ.

**ಎಂ.ಫಿಲ್. ಪ್ರಬಂಧಗಳು**

*೨೦೦೨*ರಲ್ಲಿ ಮಲ್ಲಿಕಾರ್ಜುನ ಬಾಗೋಡಿಯವರು ಎಂ.ಫಿಲ್. ಪದವಿಗಾಗಿ ಮಂಡಿಸಿದ **ಚಿತ್ರಕಲಾವಿದ ಜೆ.ಎಸ್.ಖಂಡೇರಾವ–ಒಂದು ಅಧ್ಯಯನ,** ಮತ್ತು *೨೦೦೩*ರಲ್ಲಿ ಎ.ಎಸ್.ವಿಶ್ವನಾಥ ಅವರ **ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣಗಳು,** *೨೦೦೫*ರಲ್ಲಿ ಶಂಕರಪ್ಪ ಎಂ. ಕುಂದಗೋಳ ಅವರ **ಕಲಾವಿದ ಡಿ.ವಿ.ಹಾಲಭಾವಿ ಯವರ ಬದುಕು ಮತ್ತು ಕಲಾಕೃತಿಗಳು** ಮತ್ತು ಸಿ.ಡಿ.ಜಟ್ಟೆಣ್ಣವರ ಅವರ **ಕಲಾವಿದ ಡಾ.ಎಂ.ವಿ.ಮಿಣಜಿಗಿಯವರ ಜೀವನ ಮತ್ತು ಕಲಾಕೃತಿಗಳು,** *೨೦೦೬*ರಲ್ಲಿ ಸುಚಿತ್ರಾ ಗ. ಲಿಂಗದಳ್ಳಿ ಇವರ **ವಿಜಯನಗರದ ಭಿತ್ತಿಚಿತ್ರಕಲೆ ಒಂದು ಅಧ್ಯಯನ,** ಮತ್ತು ರವಿ ವಸರಾಮ ನಾಯಕ ಇವರ **ಕಿನ್ನಾಳ ಕಲೆ ಒಂದು ಅಧ್ಯಯನ,** *೨೦೦೭*ರಲ್ಲಿ ಬಿ.ಎಮ್. ಪಾಟೀಲ ಅವರ **ನಿಪ್ಪಾಣಿ ವಾಡೆಯ ಭಿತ್ತಿಚಿತ್ರಗಳು,** ಶೈಲಾ ಬರಡೋಲ ಅವರ **ಸಂತ ಕಲಾವಿದ ಶುಭರಾಯರ ಜೀವನ ಮತ್ತು ಕಲಾಕೃತಿಗಳು,** ಉಮೇಶ ಎಸ್. ಅವರ **ಕರ್ನಾಟಕ ಜೈನ ಚಿತ್ರಕಲೆ** ಹಾಗೂ ಶಶಿಕಾಂತ ಬಸರಿಕಟ್ಟಿ ಅವರ **ಕಲಘಟಗಿ ಕಲೆ** *೨೦೦೮*ರಲ್ಲಿ ಕೃಷ್ಣವೇಣಿ ಅವರ **ಬಳ್ಳಾರಿ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ,** ಯೋಗೀಶ ಹೆಚ್. ಅವರ **ಚಿತ್ರದುರ್ಗ ಜಿಲ್ಲೆಯ ಚಿತ್ರಕಲೆ,** ಮಹಾಕೋಟೇಶ್ವರಗೌಡ ಪಾಟೀಲ ಅವರ **ಬೆಳಗಾವಿ ಜಿಲ್ಲೆಯ ಚಿತ್ರಕಲೆ,** ಸುರೇಶ ಬಡಿಗೇರ ಅವರ **ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಗಳ ಚಿತ್ರಕಲೆ,** ಸಂತೋಷಕುಮಾರ ಕುಲಕರ್ಣಿ ಅವರ **ದಾವಣಗೆರೆ ಜಿಲ್ಲೆಯ ಚಿತ್ರಕಲೆ,** ಜಯರಾಜ ಚಿಕ್ಕಪಾಟೀಲರ ಅವರ **ಕರ್ನಾಟಕದ ಜಾಹೀರಾತುಗಳಲ್ಲಿ ಸಾಂಸ್ಕೃತಿಕ ನೆಲೆಗಳು,** ಮಹೇಶ ಉಮತಾರ ಅವರ **ಬಿ.ಪಿ.ಬಾಯಿರಿ ಕಲೆ ಮತ್ತು ಕಲಾ ಸಾಹಿತ್ಯ,** ಗಿರಿಜಾ ಬಿರಾದಾರ ಅವರ **ಬಿಜಾಪುರ ಜಿಲ್ಲೆಯ ಚಿತ್ರಕಲೆ,** ಬಸಯ್ಯ ಗವಿಮಠ ಅವರ **ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ,** ಕೃಷ್ಣೇಗೌಡ ಹೆಚ್.ಎನ್. ಅವರ **ಕರ್ನಾಟಕದಲ್ಲಿ ಟಿಬೇಟಿಯನ್ನರ ಚಿತ್ರಕಲೆ,** ಮಹಾಂತೇಶ ಪಲದಿನ್ನಿ ಅವರ **ಕರ್ನಾಟಕದ ಲಜ್ಜಾಗೌರಿ ಶಿಲ್ಪಗಳು,** ಈ ಪ್ರಬಂಧಗಳು ಕರ್ನಾಟಕ ದೃಶ್ಯಕಲೆಯ ಕುರಿತಾಗಿ ಬಂದ ಸಂಶೋಧನಾ ಅಧ್ಯಯನಗಳಾಗಿವೆ.

ಹೀಗೆ ಗುಲ್ಬರ್ಗಾ, ಬೆಂಗಳೂರು, ಕರ್ನಾಟಕ ವಿ.ವಿ. ಮತ್ತು ಕನ್ನಡ ವಿ.ವಿ.ಗಳಲ್ಲಿ ಪಿಹೆಚ್.ಡಿ. ಪದವಿಗಾಗಿ ೨೯ ಸಂಶೋಧನಾ ಪ್ರಬಂಧಗಳು ರಚನೆಯಾಗಿದ್ದು, ಈ ನಿಟ್ಟಿನಲ್ಲಿ ೧೫ಕ್ಕೂ ಹೆಚ್ಚು ಸಂಶೋಧಕರು ಅಧ್ಯಯನ ನಿರತರಾಗಿದ್ದಾರೆ. ಇದಲ್ಲದೇ ವಿಶ್ವವಿದ್ಯಾಲಯಗಳ ಬಿ.ಎಫ್.ಎ.ಪದವಿ ಹಾಗೂ ಮತ್ತು ಸ್ನಾತಕೋತ್ತರ ಹಂತದಲ್ಲಿ ಸುಮಾರು ೪೦೦ಕ್ಕೂ ಹೆಚ್ಚಿನ ಲಘುಶೋಧ ಪ್ರಬಂಧಗಳು ರಚನೆಗೊಂಡಿವೆ. ಪದವಿ ತರಗತಿಗಳಿಗೆ ಅಧ್ಯಯನದ ಭಾಗವಾಗಿ ಕಿರು ಸಂಶೋಧನಾ ಪ್ರಬಂಧಗಳು ರಚನೆಯಾಗಿದ್ದು, ಸಂಶೋಧನ ಪ್ರಕಾರವು ದೃಶ್ಯಕಲಾಕ್ಷೇತ್ರದಲ್ಲಿ ಅನಿವಾರ್ಯ ಅಧ್ಯಯನವಾಗಿ ಬೆಳೆಯುತ್ತಿದೆ. ಹೀಗೆ ಈ ಕ್ಷೇತ್ರದಲ್ಲಿ ಸಂಶೋಧನೆಗಳು ತೀವ್ರವಾಗಿ ಮುನ್ನಡೆಯುತ್ತಲಿದ್ದು, ಭವಿಷ್ಯತ್ತಿನಲ್ಲಿ ಕಲಾಕ್ಷೇತ್ರವು ಸಂಶೋಧನಾತ್ಮಕವಾಗಿಯೂ ಬಲಗೊಳ್ಳುವ ಆಶಯವನ್ನು ನಿರೀಕ್ಷಿಸಬಹುದು!

**ಅಧ್ಯಯನ ಸ್ವರೂಪ**

ಈ ಅಧ್ಯಯನವನ್ನು ಒಟ್ಟು ಆರು ಅಧ್ಯಾಯಗಳಲ್ಲಿ ವಿಂಗಡಿಸಿಕೊಂಡಿದ್ದು ಪ್ರತಿಯೊಂದು ಅಧ್ಯಾಯದ ವಿಷಯವನ್ನು ಕುರಿತು ಸಂಕ್ಷಿಪ್ತ ಮಾಹಿತಿಯನ್ನು ಇಲ್ಲಿ ಮಾಡಲಾಗಿದೆ.

**ಒಂದನೆಯ ಅಧ್ಯಾಯದಲ್ಲಿ** ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ, ವಿಧಾನಗಳು ಮತ್ತು ಮಹತ್ವ, ಆಕರ ಸಾಮಗ್ರಿಗಳನ್ನು ಕುರಿತಾದ ವಿವರಣೆಗಳನ್ನು ದಾಖಲಿಸಲಾಗಿದೆ.

**ಎರಡನೆಯ ಅಧ್ಯಾಯದಲ್ಲಿ** ರುಮಾಲೆ ಚನ್ನಬಸವಯ್ಯನವರ ಸಾಂಸ್ಕೃತಿಕ ಪರಿಸರ, ಬಾಲ್ಯ ಜೀವನ ಮತ್ತು ಕಲಾಶಿಕ್ಷಣ, ದೊಡ್ಡಬಳ್ಳಾಪುರದ ಸಾಂಸ್ಕೃತಿಕ ಪರಿಸರ, ಪ್ರಾಥಮಿಕದಿಂದ ಕಲಾಶಿಕ್ಷಣದವರೆಗೆ ಅಂದರೆ ಬೆಂಗಳೂರು ಕಲಾಶಾಲೆ ಮತ್ತು ಮೈಸೂರು ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆ ಹಂತ ಹಂತವಾಗಿ ಸಾಗಿದ ಕಲಾಶಿಕ್ಷಣದ ಕುರಿತು ಅಧ್ಯಯನ ನಡೆಸಲಾಗಿದೆ.

**ಮೂರನೆಯ ಅಧ್ಯಾಯದಲ್ಲಿ** ರುಮಾಲೆ ಚನ್ನಬಸವಯ್ಯನವರ ವೃತ್ತಿ ಮತ್ತು ಪ್ರವೃತ್ತಿಗಳ ಕುರಿತು ವಿವಿಧ ಘಟಣೆಗಳನ್ನು ಕುರಿತು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ.

**ನಾಲ್ಕನೆಯ ಅಧ್ಯಾಯದಲ್ಲಿ** ರುಮಾಲೆ ಚನ್ನಬಸವಯ್ಯ ಅವರು ರಚಿಸಿದ ವರ್ಣಚಿತ್ರಗಳನ್ನು ಮಾಧ್ಯಮವಾರು ಅಂದರೆ ಜಲವರ್ಣಗಳ ಕಲಾಕೃತಿಗಳು ಮತ್ತು ತೈಲವರ್ಣಗಳ ಕಲಾಕೃತಿಗಳು ಇವುಗಳ ಪರಿಚಯದ ಜೊತೆಗೆ ವಸ್ತುವಿಷಯಗಳನ್ನು ವರ್ಗೀಕರಿಸಿಕೊಂಡು ವಿಮರ್ಶಾತ್ಮಕವಾಗಿ ಚರ್ಚಿಸಲಾಗಿದೆ.

**ಐದನೆಯ ಅಧ್ಯಾಯದಲ್ಲಿ** ರುಮಾಲೆ ಚನ್ನಬಸವಯ್ಯ ಅವರು ರಚಿಸಿದ ಕಲಾಕೃತಿಗಳ ಮೇಲಾದ ಪ್ರಭಾವ ಪ್ರೇರಣೆ ಮತ್ತು ರಚನಾಶೈಲಿ, ತಂತ್ರಗಾರಿಕೆಗಳ ಕುರಿತು ಸಮಗ್ರವಾಗಿ ವಿಶ್ಲೇಷಿಸಲಾಗಿದೆ.

**ಆರನೆಯ ಅಧ್ಯಾಯದಲ್ಲಿ** ಪ್ರಸ್ತುತ ಈ ಅಧ್ಯಾಯವು ಸಮಾರೋಪ ಅಧ್ಯಾಯವಾಗಿದ್ದು, ಒಟ್ಟು ಐದು ಅಧ್ಯಾಯಗಳಾಗಿ ವಿಂಗಡಿಸಿಕೊಳ್ಳಲಾಗಿರುವ ಅಧ್ಯಯನದ ವಿಷಯಕ್ಕೆ ಅನುಗುಣವಾಗಿ

ಪ್ರತಿಯೊಂದು ಅಧ್ಯಾಯಗಳ ಒಟ್ಟು ಸಮೀಕ್ಷೆಯನ್ನು ಪ್ರಸ್ತುತ ಪ್ರಬಂಧದಿಂದ ಕಂಡುಬರುವ ಮುಖ್ಯವಾದ ಫಲಿತಗಳನ್ನು ಈ ಅಧ್ಯಾಯದಲ್ಲಿ ಸಮೀಕ್ಷಿಸಲಾಗಿದೆ.

**ಅಧ್ಯಯನದ ವಿಧಾನ**

ಈ ಕಿರು ಪ್ರಬಂಧದ ರಚನೆಗೆ ಎರಡು ರೀತಿಯ ಆಕರಗಳನ್ನು ಬಳಸಿಕೊಳ್ಳಲಾಗಿದೆ.

೧. ಮೂಲ ಆಕರ ಸಾಮಗ್ರಿಗಳು

೨. ಆನುಷಂಗಿಕ ಆಕರ ಸಾಮಗ್ರಿಗಳು

**೧. ಮೂಲ ಆಕರ ಸಾಮಗ್ರಿ :** ಪ್ರಸ್ತುತ ಮೂಲ ಆಕರ ಸಾಮಗ್ರಿಗಳಲ್ಲಿ ಮುಖ್ಯವಾದದ್ದು ಕ್ಷೇತ್ರಕಾರ್ಯ. ಇದರಲ್ಲಿ ವ್ಯಕ್ತಿ ಸಂದರ್ಶನ, ಧ್ವನಿಮುದ್ರಣ, ಛಾಯಾಚಿತ್ರಣ ಮಾಡುವುದು ಹಾಗೂ ಅವರ ಬಗ್ಗೆ ಪ್ರಕಟವಾದ ಗ್ರಂಥ ಹಾಗೂ ಲೇಖನಗಳನ್ನು ಸಂಗ್ರಹಿಸಿ ವಿವರ ಪಡೆಯುವುದಾಗಿದೆ.

**ಸಂದರ್ಶನ :** ಕಲಾವಿದ ರುಮಾಲೆ ಅವರ ಕುಟುಂಬದವರನ್ನು ಸಂದರ್ಶಿಸಿ ಅವರ ಬಾಲ್ಯ, ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣದ ಹಂತದಲ್ಲಿ ಕಲೆಯ ಕಡೆಗೆ ವಾಲಿದ ಅವರ ಮನಸ್ಸು, ಪ್ರೇರಣೆ ನೀಡಿದ ಕಲಾವಿದರು, ಗುರುಗಳು, ಕೌಟುಂಬಿಕ ಹಿನ್ನೆಲೆ, ಮೈಸೂರಿನಲ್ಲಿ ಹಾಗೂ ಬೆಂಗಳೂರಿನ ಚಿತ್ರಕಲಾ ಅಭ್ಯಾಸ, ಕಲಾವಾತವರಣ, ಶಿಕ್ಷಕವೃಂದ, ಚಿತ್ರಕಲಾ ಪ್ರದರ್ಶನ, ಕಲಾವೃತ್ತಿ, ಸ್ವಾತಂತ್ರ್ಯ ಚಳುವಳಿ, ಸೇವಾದಳ ಇವುಗಳ ಅನುಭವಗಳಾಗಿವೆ. ಅವರ ಚಿತ್ರಶೈಲಿ, ತಂತ್ರ, ರೇಖಾವಿನ್ಯಾಸ ಹಾಗೂ ವರ್ಣಗಳ ಬಳಕೆ ಅಲ್ಲದೇ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಅನೇಕ ವಿಷಯಗಳನ್ನು ಅವರ ಕುಟುಂಬದವರಿಂದ ಹಾಗೂ ಸಂಬಂಧಿಕರಿಂದ, ಸಹಪಾಠಿಗಳಿಂದ ಸಂದರ್ಶನದ ಮೂಲಕ ಸಂಗ್ರಹಿಸಲಾಗಿದೆ. ರುಮಾಲೆಯವರ ವ್ಯಕ್ತಿತ್ವದ ವಿವಿಧ ಮುಖಗಳನ್ನು ತಿಳಿದುಕೊಳ್ಳುವ ಉದ್ದೇಶದಿಂದ ಪ್ರಶ್ನಾವಳಿಯನ್ನು ಸಿದ್ಧಪಡಿಸಿ ಅದನ್ನು ಅವರುಗಳ ಎದುರಿನಲ್ಲಿ ಪ್ರಶ್ನೆಗಳಿಗೆ ಅನುಗುಣವಾಗಿ ಚರ್ಚಿಸಿ ಅವರಿಂದ ಬಂದ ಉತ್ತರಗಳನ್ನು ಅಭಿಪ್ರಾಯಗಳನ್ನು ಬಳಸಿಕೊಳ್ಳಲಾಗಿದೆ.

**ಛಾಯಾಚಿತ್ರಣ :** ಅವರ ಅಮೂಲ್ಯ ಚಿತ್ರಗಳನ್ನು ಛಾಯಾಗ್ರಹಣಕ್ಕಾಗಿ ಕಲಾವಿದರ ಸ್ವಗೃಹಕ್ಕೆ ಬೇಟಿನೀಡಿ ಸ್ವಗೃಹದಲ್ಲಿಯೇ ಗ್ಯಾಲರಿ ಇರುವುದರಿಂದ ಆ ಗ್ಯಾಲರಿಯ ಉಸ್ತುವಾರಿ ನೋಡಿಕೊಳ್ಳುವ ಸಂಜಯ್ ಅವರಿಂದ ರುಮಾಲೆ ಅವರು ರಚಿಸಿದ ಚಿತ್ರಗಳು, ಛಾಯಾಚಿತ್ರಗಳ ಸಿ.ಡಿ.ಯನ್ನು ತೆಗೆದುಕೊಂಡು ಹೀಗೆ ಕ್ಷೇತ್ರಕಾರ್ಯದ ಅನುಭವದ ವೇದ್ಯ ವಿವರಗಳನ್ನು ಅಧ್ಯಯನಕ್ಕೆ ಅನುಕೂಲವಾಗುವಂತೆ ಟಿಪ್ಪಣಿ, ಪಟ್ಟಿಕೆಗಳನ್ನು ಮಾಡಿಕೊಂಡು ಪ್ರಬಂಧಕ್ಕೆ ಅವಶ್ಯವಾದ ವಿಷಯವನ್ನು ಸಂಗ್ರಹಿಸಿಕೊಳ್ಳಲಾಗಿದೆ.

**೨. ಆನುಷಂಗಿಕ ಆಕರ ಸಾಮಗ್ರಿ :** ಸಂಶೋಧನಾ ಮಹಾಪ್ರಬಂಧಗಳು ಪ್ರಕಟಿತ, ಅಪ್ರಕಟಿತ ಸಾಹಿತ್ಯ ಕಲಾಕೃತಿಗಳು, ನಿಘಂಟು, ವಿಶ್ವಕೋಶ, ಗೆಝೆಟಿಯರ್‌ಗಳು, ಅನುವಾದ ಗ್ರಂಥಗಳು, ಸಂಪಾದನ ಗ್ರಂಥಗಳು, ಬೇರೆ ಬೇರೆ ಸ್ಥಳಗಳಲ್ಲಿನ ಗ್ರಂಥಾಲಯಗಳ, ಕಲಾಶಾಲೆಗಳ ಮತ್ತು ಕಲಾಪ್ರದರ್ಶನಗಳಿಗೆ ಭೇಟಿ ನೀಡಿ ವಿಷಯ ಸಂಗ್ರಹಿಸಿಕೊಂಡು ಪ್ರಸ್ತುತ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

**ಅಧ್ಯಾಯ ಎರಡು**

**ರುಮಾಲೆ ಚನ್ನಬಸವಯ್ಯನವರ ಸಾಂಸ್ಕೃತಿಕ ಪರಿಸರ, ಬಾಲ್ಯ ಜೀವನ ಮತ್ತು ಕಲಾ ಶಿಕ್ಷಣ**

ಈ ಅಧ್ಯಾಯದಲ್ಲಿ ಕಲಾವಿದ ರುಮಾಲೆಯವರ ವಂಶಾವಳಿ, ಸಾಂಸ್ಕೃತಿಕ ಹಿನ್ನೆಲೆ, ರುಮಾಲೆ ಅವರ ಮನೆತನದ ಪರಿಚಯ, ಮನೆತನಕ್ಕೆ ರುಮಾಲೆ ಎಂಬ ಹೆಸರು ಬಂದ ವಿವರಣೆ ಮತ್ತು ಬಾಲ್ಯ ಜೀವನ ಹಾಗೂ ಪ್ರಾಥಮಿಕ ಕಲಾಶಿಕ್ಷಣ. ಆಗಿನ ಕಾಲದ ಸಾಂಸ್ಕೃತಿಕ ಚಟುವಟಿಕೆಗಳು. ಇಂತಹ ಅನೇಕ ವಿಷಯಗಳ ಕುರಿತು ಇಲ್ಲಿ ವಿವರಿಸಲಾಗಿದೆ.

**ಅಧ್ಯಾಯ ಮೂರು**

**ರುಮಾಲೆ ಚನ್ನಬಸವಯ್ಯನವರ ವೃತ್ತಿ ಮತ್ತು ಪ್ರವೃತ್ತಿಗಳ ಕುರಿತು**

ಈ ಅಧ್ಯಾಯದಲ್ಲಿ ರುಮಾಲೆ ಅವರು ಚಿತ್ರಕಲೆಯಲ್ಲಿ ಆಸಕ್ತಿ ಇರುವುದನ್ನು ಪಾಲಕರು, ಸ್ನೆಹಿತರು ಅರಿತುಕೊಂಡು ಪ್ರೋತ್ಸಾಹಕಟ್ಟಿದ್ದು, ಅದನ್ನು ಅವರು ಅನುಸರಿಸಿಕೊಂಡು ಕಲೆಯಲ್ಲಿ ಮಾಡಿದ ಸಾಧನೆಗಳು ಕೃತಿ ರಚನೆ ಮಾಡಲು ದೇಶವಿದೇಶಗಳಿಗೆ ಹೋಗಿದ್ದು, ಅವರು ಕಲಾವಲಯದಲ್ಲಿ ಬೆಳೆದು ಬಂದ ವಿವರಗಳು, ಸಮಕಾಲೀನ ಕಲಾವಿದರ ಸಾಂಧರ್ಬಿಕ ಪರಿಚಯಗಳು ಹಾಗೂ ಅವರ ಕಲಾಕೃತಿಗಳನ್ನು ನೋಡಿದ ವಿದ್ವಾಂಸರ ಅಭಿಪ್ರಾಯಗಳನ್ನು ವಿಸ್ತರವಾಗಿ ಹೇಳಲಾಗಿದೆ. ಮತ್ತು ಈಗಿನ ಸಮಕಾಲೀನ ಕಲಾವಿದರುಗಳ ಸಂದರ್ಶನದ ಸಾಂಧರ್ಬಿಕ ಹೇಳಿಕೆಗಳು, ರುಮಾಲೆ ಅವರ ಮೇಲೆ ವ್ಯಾನ್‌ಗಾಗೋ ಕಲಾಕೃತಿಗಳ ಪ್ರಭಾವ ಬೀರಿದ್ದು ಮತ್ತು ಅವರಿಂದ ಹಲವಾರು ರೀತಿಯ ಪ್ರಭಾವ ಪ್ರೇರಣೆ, ಸ್ಫೂರ್ತಿಗಳನ್ನು ರುಮಾಲೆ ಅವರು ಪಡೆದಿರುವ ಕುರಿತು ಪ್ರಸ್ತುತ ಈ ಅಧ್ಯಾಯನದಲ್ಲಿ ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ.

**ಅಧ್ಯಾಯ ನಾಲ್ಕು**

**ರುಮಾಲೆ ಅವರ ಕಲಾಕೃತಿಗಳ ಹರವು ವಸ್ತುವಿಷಯ**

ಪ್ರಸ್ತುತ ಅಧ್ಯಾಯದಲ್ಲಿ ರುಮಾಲೆ ಚನ್ನಬಸವಯ್ಯ ಅವರು ರಚಿಸಿದ ಭಾವಚಿತ್ರಗಳು ಮತ್ತು ಪ್ರಕೃತಿಯ ವರ್ಣಚಿತ್ರಗಳ ಕುರಿತಾದ ವಿಶ್ಲೇಷಣೆ ಇರುವುದು. ಇದರಲ್ಲಿ ಅವರ ಕಲಾಕೃತಿಗಳನ್ನು ಈ ಕೆಳಗಿನಂತೆ ವರ್ಗೀಕರಿಸಿಕೊಂಡು ಇಲ್ಲಿ ಚರ್ಚಿಸಲಾಗಿದೆ.

ಚನ್ನಬಸವಯ್ಯನವರ ಕಲಾಕೃತಿಗಳಿಗೆ ಪ್ರೇರಣೆ ನೀಡಿವೆ. ಮತ್ತು ಅವರ ವಿಶೇಷವಾದ ಕಲಾ ರಚನೆಯ ತಂತ್ರಶೈಲಿಗಳನ್ನು ಕುರಿತು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಅಧ್ಯಾಯ ಆರು**

**ಸಮಾರೋಪ**

ಈ ಅಧ್ಯಾಯನದ ಪ್ರಸ್ತುತ ಸಂಶೋಧನಾ ಲಘುಪ್ರಬಂಧದ ಐದು ಅಧ್ಯಾಯಗಳಲ್ಲಿ ಚರ್ಚಿತವಾದ ಫಲಿತಗ ವಿಶ್ಲೇಷಣೆಯ ಸಮೀಕ್ಷೆಯನ್ನು ಮಾಡಲಾಗಿದೆ.



ನಿಜಲಿಂಗಪ್ಪನವರೊಂದಿಗೆ ರೂಮಾಲೆ ಚನ್ನಬಸವಯ್ಯನವರು



ಗೌರ್ನರ್ ಧರ್ಮವೀರ ಅವರೊಂದಿಗೆ ರೂಮಾಲೆಯವರು

ಪಿ. ವಿ. ನರಸಿಂಹರಾವ್ ಅವರೊಂದಿಗೆ ರೂಮಾಲೆಯವರು



ರಾಮಕೃಷ್ಣ ಹೆಗಡೆ ಅವರೊಂದಿಗೆ ರೂಮಾಲೆಯವರು

## ಅಧ್ಯಾಯ : ಎರಡು

# ಸಾಂಸ್ಕೃತಿಕ ಪರಿಸರ, ಬಾಲ್ಯ ಜೀವನ ಮತ್ತು ಕಲಾ ಶಿಕ್ಷಣ

## ಅಧ್ಯಾಯ ೨

# ರುಮಾಲೆ ಚನ್ನಬಸವಯ್ಯನವರ ಸಾಂಸ್ಕೃತಿಕ ಪರಿಸರ, ಬಾಲ್ಯಜೀವನ ಮತ್ತು ಕಲಾಶಿಕ್ಷಣ

**ಭಾ**ರತೀಯ ನಿಸರ್ಗದ ನಿಗೂಢತೆಯಲ್ಲೂ ಅದರ ಅದ್ಭುತ ಸೌಂದರ್ಯದಲ್ಲೂ ಬದುಕಿನ ಗಾಢತೆಯನ್ನು ಹಾಗೂ ನವಚೈತನ್ಯವನ್ನು ಕಂಡವರು. ಆ ಶಕ್ತಿಯನ್ನೇ ಕುರಿತು ಚಿಂತಿಸಿ ಪ್ರೀತಿಸಿದವರು. ಅದರಲ್ಲೇ ಪರಮಶಾಂತಿಯನ್ನು ಕಂಡುಕೊಂಡವರು. ಇವರು ಕಲಾ ಕ್ಷೇತ್ರದಲ್ಲದೆ ಸ್ವಾತಂತ್ರ್ಯ ಚಳುವಳಿಯಲ್ಲಿ, ಸೇವಾದಳದಲ್ಲಿ, ಸಮಾಜ ಮುಖಿಯಾಗಿ ಹೀಗೆ ಅನೇಕ ಕ್ಷೇತ್ರಗಲ್ಲಿ ನಿಸ್ವಾರ್ಥ ಸೇವೆ ಸಲ್ಲಿಸಿದ ಧೀಮಂತ ನಾಯಕರು ಆಗಿದ್ದ ರುಮಾಲೆ ಅವರು ಈ ಹಿನ್ನೆಲೆಯಲ್ಲಿ ಮೈತಾಳಿದ ಕಲಾ ಪ್ರಕಾರಗಳೇ ವ್ಯಕ್ತಿ ಮತ್ತು ಸಮಷ್ಠಿ ಹಿತಕ್ಕೆ ಆನಂದವನ್ನು ನೀಡುವಂತಹವುಗಳಾಗಿವೆ. ಲಲಿತಕಲೆಗಳಲ್ಲಿ ಒಂದಾದ ಚಿತ್ರಕಲೆ ಗಮನಾರ್ಹವಾದ ಕಲೆಯಾಗಿದ್ದು ಈ ಕ್ಷೇತ್ರಕ್ಕಾಗಿ ಅರ್ಪಿಸಿಕೊಂಡ ಚಿತ್ರಕಾರ ರುಮಾಲೆಯವರು ತಪಸ್ವಿ ಮಹಾರಾಜ ಮತ್ತು ಶಿವಬಾಲಯೋಗಿ ಸ್ವಾಮಿಜಿಯವರ ಪರಮ ಭಕ್ತರಾಗಿ ನಿಷ್ಠೆ ಹೊಂದಿದ ಆಧ್ಯಾತ್ಮಿಕ ಬದುಕನ್ನು ಸೇವಿಸಿದವರು. ಚಿತ್ರಕಲೆಯೆ ಅವರ ಬದುಕಿನ ದೈವ, ದೇವರು ಅದರಲ್ಲಿಯೇ ಜೀವನದ ಸಾರ್ಥಕತೆಯನ್ನು ಕೂಡ ಕಂಡುಕೊಂಡವರು. ಹೀಗಾಗಿ ಕಲಾ ಕ್ಷೇತ್ರದಲ್ಲಿ ಶ್ರೀ ರುಮಾಲೆ ಅವರದೇ ಒಂದು ವಿನೂತನ ಮಾರ್ಗವಾಗಿದೆ.

ಈ ಹಿಂದೆ "ದೊಡ್ಡಬಳ್ಳಾಪುರವು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಎಂಟು ತಾಲೂಕುಗಳಲ್ಲಿ ದೊಡ್ಡಬಳ್ಳಾಪುರವೂ ಒಂದು ಆಗಿತ್ತು. ಇದು ಬೆಂಗಳೂರಿನ ವಾಯುವ್ಯ ದಿಕ್ಕಿನಲ್ಲಿದೆ. ಈ ತಾಲೂಕಿನ

ಪೂರ್ವದಲ್ಲಿ ದೇವನಹಳ್ಳಿ ಪಶ್ಚಿಮದಲ್ಲಿ ತುಮಕೂರು ದಕ್ಷಿಣದಲ್ಲಿ ಬೆಂಗಳೂರು, ನೆಲಮಂಗಲ, ಉತ್ತರದಲ್ಲಿ ಗೌರಿಬೀದನೂರು, ಚಿಕ್ಕಬಳ್ಳಾಪುರ ತಾಲೂಕುಗಳು ಸುತ್ತುವರಿದಿವೆ. ತಾಲೂಕಿನ ವಿಸ್ತೀರ್ಣ ೫೭೮ ಕಿ.ಮೀ. ತಾಲೂಕಿನ ಹೆಚ್ಚು ಪ್ರದೇಶ ಕೆಂಪು ಮಣ್ಣಿನಿಂದ ಕೂಡಿದೆ. ಕೆಲವು ಕಡೆಗಳಲ್ಲಿ ಇದು ಮರಳು ಮಿಶ್ರಿತವಾಗಿದ್ದು ರಾಗಿ, ಜೋಳ ಮೊದಲಾದ ಒಣಬೇಸಾಯದ ಬೆಳೆಗಳಿಗೆ ಉಪಯುಕ್ತವಾಗಿದೆ. ತಾಲೂಕಿನ ವಾಯುವ್ಯ ಭಾಗದಲ್ಲಿರುವ ಕುರುಚಲು ಕಾಡೊಂದನ್ನುಳಿದರೆ ಇಲ್ಲಿ ಇನ್ನಾವುದೇ ಸ್ವಾಭಾವಿಕ ಸಸ್ಯವರ್ಗಗಳು ಕಂಡುಬರುವುದಿಲ್ಲ. ಉತ್ರದಲ್ಲಿನ ಮಾಕಳಿ ದುರ್ಗಾದ ಬಳಿ ಒಂದು ರಾಜ್ಯಾರಣ್ಯ ಪ್ರದೇಶವಿದೆ. ಇಲ್ಲಿ ರಾಗಿ, ಜೋಳ ಮುಖ್ಯ ಬೆಳೆಗಳು. ಅಲ್ಲದೇ ಹೊಗೆಸೊಪ್ಪನ್ನು ಬೆಳೆಸುತ್ತಾರೆ. ಆರೂಗಡ್ಡೆ ಕೋಸು, ಕ್ಯಾರೆಟ್, ಹಸಿಮೆಣಸು, ಮೊದಲಾದ ತರಕಾರಿಗಳನ್ನು ಈ ಭಾಗದಲ್ಲಿ ವಿಶೇಷವಾಗಿ ಬೆಳೆಸುತ್ತಾರೆ."[೧]

ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ ದೊಡ್ಡಬಳ್ಳಾಪುರದ ಪ್ರದೇಶದಲ್ಲಿ ಐತಿಹಾಸಿಕ ದೇವಾಲಯಗಳನ್ನು ನಾವು ಕಾಣಬಹುದು. ವೆಂಕಟರಮಣಸ್ವಾಮಿ ದೇವಾಲಯ, ಚೌಡೇಶ್ವರಿ ದೇವಾಲಯ, ಕಾಶಿ ವಿಶ್ವೇಶ್ವರ ದೇವಾಲಯ, ಶ್ರೀ ಕಂಠೇಶ್ವರ ದೇವಾಲಯ, ನಗರೇಶ್ವರ ದೇವಾಲಯ, ಕಾಳಮ್ಮ ದೇವಾಲಯಗಳಿವೆ. ಘಾಟಿ ಸುಬ್ರಹ್ಮಣ್ಯ ದೇವಾಲಯವು ದೊಡ್ಡಬಳ್ಳಾಪುರದಿಂದ ಸುಮಾರು ೧೪ ಕಿ.ಮೀ. ದೂರದಲ್ಲಿದೆ. ಇಲ್ಲಿ ಪ್ರತಿ ವರ್ಷ ಜಾತ್ರೆಯ ಸಮಯದಲ್ಲಿ ದನಗಳ ಜಾತ್ರೆ ನಡೆಯುತ್ತದೆ ಮತ್ತು ಶನಿ ಮಹ್ಮಾತ ಸ್ವಾಮಿ ದೇವಾಲಯವು ಬಳ್ಳಾಪುರದಿಂದ ಸುಮಾರು ೧೫ ಕಿ.ಮಿ. ದೂರದಲ್ಲಿರುವ ಮದುರೆಯಲ್ಲಿದೆ.

**"ಅರ್ಕಾವತಿ ತೀರದ ಶ್ರೀರಾಮ ಮಂದಿರ :** ಸುಮಾರು ೪೦೦ ವರ್ಷಗಳ ಹಿಂದೆ ಮೈಸೂರು ಅರಮನೆಯಲ್ಲಿ ನಾಯಕರಾಗಿದ್ದ ಅರುಣಾಚಲಪತಿ ಎಂಬುವರು ಅರ್ಕಾವತಿ ನದಿಯಲ್ಲಿ ಸ್ನಾನ ಮಾಡುವಾಗ ರಾಮ ಲಕ್ಷ್ಮಣ ಸೀತೆ ಮತ್ತು ಆಂಜನೇಯ ಸ್ವಾಮಿ ವಿಗ್ರಹಗಳು ನದಿಯಲ್ಲಿ ಸಿಕ್ಕಿದ್ದವು. ಅದನ್ನು ಒಳ್ಳೆ ಶುಭ ಮುಹೂರ್ತದಲ್ಲಿ ಪ್ರತಿಷ್ಠಾಪಿಸಿದರು."[೨]

**"ಪುಜಾರಿ ಇಲ್ಲದ ನೆಲ ಆಂಜನೇಯ ಸ್ವಾಮಿ :** ಇದೇ ಊರಿನ ಶ್ರೀಕಂಠಯ್ಯನವರಿಗೆ ೬೦೦ ವರ್ಷಗಳ ಹಿಂದೆ ಇವರ ಮನೆ ಜಮೀನಿನಲ್ಲಿ ಆಂಜನೇಯ ಸ್ವಾಮಿಯ ವಿಗ್ರಹ ಸಿಕ್ಕಿದ್ದರಿಂದ ಇದಕ್ಕೆ ನೆಲ ಆಂಜನೇಯಸ್ವಾಮಿ ಎಂದು ಹೆಸರು."[೩]

---

೧. ತಾಲೂಕು ಕನ್ನಡ ಸಾಹಿತ್ಯ ಪರಿಷತ್ತು ದೊಡ್ಡಬಳ್ಳಾಪುರ ರಜತ ಸಿರಿ-೨೦೦೪, ಪು. ೧

೨. ದಶಮಾನೋತ್ಸವ ೨೦೦೩, ಸ್ಮರಣ ಸಂಚಿಕೆ ಪು. ೩

೩. ದಶಮಾನೋತ್ಸವ ೨೦೦೩, ಸ್ಮರಣ ಸಂಚಿಕೆ ಪು. ೩

**ಪುರಾತನ ಪುಣ್ಯಕ್ಷೇತ್ರ ಘಾಟಿ ಸುಬ್ರಮಣ್ಯ** : ಇದು ಊರಿನಿಂದ ಸುಮಾರು ೧೪ ಕಿ.ಮೀ. ದೂರದಲ್ಲಿ ಇದ್ದು ಶ್ರೀ ಸ್ವಾಮಿಯು ಶಿಲಾರೂಪದಲ್ಲಿರುವನು. ಮುಂಭಾಗದಲ್ಲಿ ಏಳು ಹೆಡೆಗಳು ಪೂರ್ವಾಭಿಮುಖವಾಗಿ ಸುಬ್ರಮಣ್ಯ ಸ್ವಾಮಿ ಪಶ್ಚಿಮಾಭಿಮುಖವಾಗಿ ಲಕ್ಷ್ಮೀ ಸಮೇತರಾಗಿ ಶ್ರೀ ನರಸಿಂಹ ಸ್ವಾಮಿ ಒಂದೇ ಶಿಲೆಯಲ್ಲಿ ರಾರಾಜಿಸುತ್ತಿರುವುದು ಸುಮಾರು ೬೦೦ ವರ್ಷಗಳ ಇತಿಹಾಸವನ್ನು ಕಟ್ಟಿಕೊಡುತ್ತದೆ.

"ಭಾರತದ ಸ್ವಾತಂತ್ರ್ಯ ಸಂಗ್ರಾಮದುದ್ದಕ್ಕೂ ದೊಡ್ಡ ಬಳ್ಳಾಪುರವು ತನ್ನದೇ ಆದ ಪ್ರಾಮುಖ್ಯತೆಯನ್ನು ಪಡೆದಿದೆ. ತಮ್ಮ ಲೌಕಿಕ ಆಸೆಗಳನ್ನು ಬದಿಗೊತ್ತಿ ಬ್ರಿಟಿಷರನ್ನು ಭಾರತದಿಂದ ಕಾಲ್ತೆಗೆಯುವಂತೆ ಒತ್ತಡ ಹೇರುತ್ತಾ ಅನೇಕ ಹೋರಾಟಗಳನ್ನು ಮಾಡಿದ ಅವರ ದೇಶಭಕ್ತಿ ದೊಡ್ಡಬಳ್ಳಾಪುರಕ್ಕೆ ಸೇರುತ್ತದೆ. ಅವರಲ್ಲಿ ಟಿ. ಸಿದ್ಧಲಿಂಗಯ್ಯ, ರುಮಾಲೆ ಚನ್ನಬಸವಯ್ಯ, ನಂಜುಂಡಯ್ಯ, ಆರ್.ವಿ. ಭದ್ರಣ್ಣ, ಟೈಲರ್ ಸುಬ್ಬರಾವ್ ಇನ್ನೂ ಮುಂತಾದವರು ಸ್ಮರಣೀಯರಾಗಿದ್ದಾರೆ."[೪]

**ರುಮಾಲೆ ಅವರ ಮನೆತನ**

"ಇವರ ಮನೆತನದ ಮೂಲ ವಂಶದವರ ಬಗೆಗೆ ನಮಗೆ ದಾಖಲೆ ಕೊಡುತ್ತದೆ. ಮೂಲತಃ ರುಮಾಲೆ ಚನ್ನಬಸವಯ್ಯನವರ ಮನೆತನದವರು ಬಸವಣ್ಣನ ಭಕ್ತರು. ಇವರು ಲಿಂಗಾಯಿತ ಜನಾಂಗಕ್ಕೆ ಸೇರಿದವರು. ಇವರ ಮನೆತನದವರು ತುಮಕೂರು ಜಿಲ್ಲೆಯ ಗುಬ್ಬಿ ಚನ್ನಬಸವೇಶ್ವರ ಸ್ವಾಮಿಯ ದೇವರ ಆರಾಧಕರು. ಇವರ ಸ್ವಂತ ಸ್ಥಳ ದೊಡ್ಡಬಳ್ಳಾಪುರ. ರುಮಾಲೆ ಅವರ ಕುಟುಂಬವು ರಾಜರ ಕಾಲದಿಂದಲೂ ಶ್ರೀಮಂತಿಕೆಯಿಂದ ಬೆಳೆದುಬಂದ ಕುಟುಂಬವಾಗಿತ್ತು. ರುಮಾಲೆ ಚನ್ನ ಬಸವಯ್ಯನವರ ತಂದೆ ರುಮಾಲೆ ಕರಿಬಸಪ್ಪ ತಾಯಿ ಶ್ರೀಮತಿ ಗೌರಮ್ಮ ಇವರ ವೃತ್ತಿ ಕೃಷಿ ವ್ಯಾಪಾರ. ಅಡಿಕೆ, ತೆಂಗು, ವ್ಯಾಪಾರದಲ್ಲಿ ಹೆಸರುವಾಸಿಯಾಗಿದ್ದರು. ಇವರ ಮನೆತನವು ಧಾನ ಧರ್ಮಗಳಲ್ಲಿ ಎತ್ತಿದ ಕೈ. ರುಮಾಲೆ ಚನ್ನಬಸವಯ್ಯನವರ ತಾಯಿ ಶ್ರೀಮತಿ ಗೌರಮ್ಮನವರು ಹಣವಂತರಿಗಿಂತ ಬಡ ಜನರನ್ನು ಕಂಡರೆ ಅತಿಯಾದ ಪ್ರೀತಿ ಮಮಕಾರ ಹೊಂದಿದ್ದರು. ಇವರ ಮನೆಯ ಹತ್ತಿರ ಭಿಕ್ಷುಕರು ಬಂದರೆ ಅವರು ಎಂದಿಗೂ ಊಟ ಕೊಡದೆ ಕಳುಹಿಸುತ್ತಿರಲಿಲ್ಲ. ಬಂದ ಭಿಕ್ಷುಕರಿಗೆ ಊಟ ಕೊಟ್ಟು ನೀವು ಯಾರ ಮನೆಯ ಮುಂದೆ ಹೋಗಿ ಕೈಚಾಚಿ ಬೇಡಿ ತಿನ್ನಬೇಕಾಗಿಲ್ಲ ನಿಮಗೆ ಹಸಿವಾದರೆ ನಮ್ಮ ಮನೆಯ ಹತ್ತಿರ ಬನ್ನಿ ನಿಮಗೆ ನಾನು ಊಟ ಕೊಡುತ್ತೇನೆ. ನಿಮ್ಮ ಕೈಲಿ ಆದ ಕೆಲಸವನ್ನು ಮಾಡಿ ನಿಮ್ಮ ಬೆವರ ನೀರನ್ನು ಭೂತಾಯಿಗೆ ಸುರಿಸಿ ಊಟ ಮಾಡಿ ಆ ಭೂತಾಯಿ ನಿಮ್ಮನ್ನು ಮೆಚ್ಚುತ್ತಾಳೆ. ಅವಳು ನಿಮ್ಮನು ಎಂದು ಕೈ ಬಿಡುವುದಿಲ್ಲ. ಎಂಬ ಬುದ್ಧಿಮಾತುಗಳನ್ನಾಡುತ್ತಿದ್ದರು. ಶ್ರೀಮತಿ

೪. ತಾಲೂಕು ಕನ್ನಡ ಸಾಹಿತ್ಯ ಪರಿಷತ್ತು ದೊಡ್ಡಬಳ್ಳಾಪುರ ೨೦೦೪ ರಜತ ಸಿರಿ, ಪು. ೩

## ರುಮಾಲೆಯವರ ವಂಶಾವಳಿ

**ರುಮಾಲೆ ಚನ್ನಬಸಪ್ಪ**

- ಚಿಕ್ಕರುದ್ರಪ್ಪ
- ಮುದ್ದುರಾಜಪ್ಪ
- ಕರಿಬಸಪ್ಪ
  - ಚನ್ನರುದ್ರಯ್ಯ
    - ಉಮಾದೇವಿ — ಅನುಸೂಯ
    - ಪ್ರಭು — ಸುನಂದ
    - ನಾಗರಾಜ — ಸುಜಾತ
    - ಅಕ್ಕಮಹಾದೇವಿ
  - ಚನ್ನ ಬಸವಯ್ಯ — ಬ್ರಹ್ಮಾಚಾರಿ ಆಗಿದ್ದರು
  - ಬಸವಯ್ಯ
    - ಗುರುದೇವ — ಸ್ವರ್ಣಲತಾದೇವಿ
    - ಸುಂದರರಾಜು — ಉಮಾಶಂಕರ
    - ವಿಜಯಕುಮಾರ — ಮಹೇಶಚಂದ್ರ
  - ರುದ್ರಯ್ಯ
    - ಪುಷ್ಪ — ನಾಗರಾಜು
      - ಸುನಂದ
      - ಸುದರ್ಶನ
      - ಶರತ್
        - ಮಯೂರ ಕುಮಾರ
        - ವಿಶ್ವದೀಪ್
    - ಸುಬ್ರಹ್ಮಣ್ಯ — ಮಂಜುಳ
    - ಜ್ಯೋತಿ — ಚಂದ್ರಶೇಖರ
    - ಅನುರಾಧ — ಆನಂದ

ಗೌರಮ್ಮನವರಿಗೆ ದೇವರ ಮೇಲೆ ಅಪಾರ ಪ್ರೀತಿ. ಪ್ರತಿದಿನ ಮನೆಯಲ್ಲಿ ನಿತ್ಯವೂ ಪೂಜೆ ಪುನಸ್ಕಾರಗಳು ನಡೆಯಬೇಕಿತ್ತು. ಮನೆಯ ಜವಬ್ದಾರಿಯಲ್ಲಾ ಶ್ರೀಮತಿ ಗೌರಮ್ಮನವರದೆ. ಇವರು ತಮ್ಮ ಮಕ್ಕಳನ್ನು ತುಂಬಾ ಶಿಸ್ತಿನಿಂದ ಬೆಳೆಸಿದರು. ಗೌರಮ್ಮನವರಿಗೆ ಮಕ್ಕಳನ್ನು ಕಂಡರೆ ಅತಿಯಾದ ಅಕ್ಕರೆ. ಗೌರಮ್ಮನವರು ತಮ್ಮ ಮಕ್ಕಳನ್ನು ಪ್ರೀತಿಸುವುದರ ಜೊತೆಯಲ್ಲಿ ಇತರೆ ಅಕ್ಕಪಕ್ಕದ ಮನೆಯ ಮಕ್ಕಳನ್ನು ಪ್ರೀತಿಸುತ್ತಿದ್ದರು. ಅಕ್ಕರೆಯಿಂದ ಮಾತನಾಡಿಸುತ್ತಿದ್ದರು. ರುಮಾಲೆ ಚನ್ನಬಸವಯ್ಯನವರ ತಂದೆ ರುಮಾಲೆ ಕರಿಬಸಪ್ಪನವರು ತುಂಬಾ ಶಿಸ್ತಿನ ಮನುಷ್ಯ ಮಕ್ಕಳನ್ನು ಕಂಡರೆ ಶ್ರೀಮತಿ ಗೌರಮ್ಮನ ಹಾಗೆ ಪ್ರೀತಿ ಅನುಕಂಪ ಇವರಿಗಿತ್ತು. ಇವರು ಬಹುಪಾಲು ಜಮೀನು ಹೊಲಗದ್ದೆಗಳಲ್ಲಿ ಸಮಯ ಕಳೆಯುತ್ತಿದ್ದರು. ಜಮೀನಿನಲ್ಲಿ ಬಂದಂತಹ ಅಡಿಕೆ, ತೆಂಗು, ಬಾಳೆ, ಇತ್ಯಾದಿ ದಾನ್ಯಗಳ ವ್ಯಾಪಾರವಹಿವಾಟು ನೋಡಿಕೊಳ್ಳುತ್ತಿದ್ದರು. ನೂರು ವರ್ಷಗಳ ಹಿಂದೆಯೇ ರುಮಾಲೆ ಎಂಬ ಹೆಸರಿನಲ್ಲಿ ಧರ್ಮಛತ್ರವನ್ನು ಕಟ್ಟಿದದರು. ಈ ಛತ್ರವನ್ನು ಮದುವೆ ಶುಭಾ ಕಾರ್ಯಗಳಿಗೆ ಹಾಗೂ ಊರಿನ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಕೂಡುತ್ತಾ ಬಂದಿದ್ದಾರೆ. ವಿಶೇಷವೆಂದರೆ ಈ ಛತ್ರವನ್ನು ಬಡ ಜನರಿಗೆ ಯಾವುದೇ ಶುಲ್ಕವಿಲ್ಲದೇ, ಬಾಡಿಗೆಯನ್ನು ಪಡೆಯದೆ ಉಚಿತವಾಗಿ ನೀಡುತ್ತಾ ಬಂದಿದ್ದಾರೆ. ಬಡತನ ರೇಖೆಗಿಂತ ಕೆಳಗಿರುವ ಯಾವುದೇ ವ್ಯಕ್ತಿ ಅಥವಾ ಸಮುದಾಯಗಳು ಶುಭಕಾರ್ಯ ಮಾಡುತ್ತೇವೆ ಎಂದು ಕೇಳಿದರೆ ಎಂದಿಗೂ ಇವರಲ್ಲಿ ಇಲ್ಲ ಎಂಬ ಮಾತು ಬಾರದೆ ಅವರಿಗೆ ಅನುಕೂಲ ಮಾಡಿಕೊಡುತ್ತಾ ಬಂದಿದ್ದಾರೆ. ಇದೇ ರೀತಿ ರುಮಾಲೆ ಚನ್ನಬಸವಯ್ಯನವರ ತಂದೆಯ ಕಾಲದಿಂದಲೂ ಇಂದಿನವರೆಗೂ ನಡೆಸಿಕೊಂಡು ಬರುತ್ತಿದ್ದಾರೆ. ಈ ಒಂದು ಛದ್ರದ ವೃತ್ತಕ್ಕೆ ರುಮಾಲೆ ಛತ್ರವೃತ್ತ ಎಂದೇ ಕರೆಯುತ್ತಾರೆ".[೫]

"ತುಮಕೂರಿನ ಶ್ರೀ ಶ್ರೀ ಶ್ರೀ ಶಿವಕುಮಾರ ಸ್ವಾಮಿಜಿಯವರು ಒಮ್ಮೆ ರುಮಾಲೆ ಛತ್ರದ ಕಾರ್ಯಕ್ರಮ ಒಂದರಲ್ಲಿ ಹೀಗೆ ನುಡಿದರಂತೆ ಈ ಒಂದು ರುಮಾಲೆ ಧರ್ಮಛತ್ರವು ಬಡವರಿಗೆ ಉಚಿತವಾಗಿ ಕೊಡುತ್ತಾ ಅಂಥವರಿಗೆ ಒಂದು ಅನುಕೂಲ ಮಾಡಿಕೊಂಡು ಬಂದಿದೆ. ಅದೇ ರೀತಿ ಇನ್ನೂ ಮುಂದೆಯೂ ಕೂಡ ಇದೇ ರೀತಿ ನಡೆದುಕೊಂಡು ಬರಬೇಕು. ಇದು ಕೊನೆಯವರೆಗೆ ಧರ್ಮಛತ್ರವಾಗಿಯೇ ಉಳಿಯಬೇಕು. ಈ ಧರ್ಮಛತ್ರದಿಂದ ಬಡ ಜನರಿಗೆ ಒಂದು ರೀತಿಯ ಅನುಕೂಲಕರವಾಗಬೇಕೆಂದು ಹೇಳಿದ್ದಾರೆ ಎಂಬ ಈ ಮಾತನ್ನು ರುಮಾಲೆ ಚನ್ನಬಸವಯ್ಯನವರ ತಮ್ಮನ ಮಗನಾದ ರುಮಾಲೆ ನಾಗರಾಜು ಅವರು ಸಂದರ್ಶನದಲ್ಲಿ ನುಡಿದ ಮಾತುಗಳಿವು. ಇಂದಿಗೂ ಕೂಡ ಆ ಛತ್ರದ ಜವಾಬ್ದಾರಿಯನ್ನು ನಿಭಾಯಿಸಿಕೊಂಡು ರುಮಾಲೆ ನಾಗರಾಜು ಹೋಗುತ್ತಿದ್ದಾರೆ".[೬]

---

೫. ರುಮಾಲೆ ನಾಗರಾಜು ರು.ಚ.ತಮ್ಮನ ಮಗ ಸಂದರ್ಶನ ಸೆಪ್ಟೆಂಬರ್, ೨೦೦೯

೬. ರುಮಾಲೆ ನಾಗರಾಜು ರು.ಚ.ತಮ್ಮನ ಮಗ ಸಂದರ್ಶನ ಸೆಪ್ಟೆಂಬರ್, ೨೦೦೯

**ಮನೆತನಕ್ಕೆ ರುಮಾಲೆ ಎಂಬ ಹೆಸರು ಬಂದದ್ದು**

ರುಮಾಲೆ ಚನ್ನಬಸಪ್ಪನ ತಾತಾನ ಕಾಲದಿಂದಲೂ ಇವರ ಮನೆತನಕ್ಕೆ ರುಮಾಲೆ ಎಂಬ ಹೆಸರು ರೂಢಿಯಾಗಿ ಬಂದಿದೆ. ಕಾರಣ ಇಷ್ಟೇ ರುಮಾಲೆ ಚನ್ನಬಸಪ್ಪನ ತಾತನ ಕಾಲದಿಂದಲೂ ಕುಟುಂಬದ ಯಜಮಾನರು ಅವರುಗಳ ತಲೆಗಳಿಗೆ ಬಹಳ ಅಂದವಾಗಿ ಕಾಣುವಂತೆ ರುಮಾಲೆಯನ್ನು ದೊಡ್ಡದಾಗಿ ಕಟ್ಟಿಕೊಳ್ಳುತ್ತಿದ್ದರಂತೆ ಇದನ್ನು ಕಂಡ ಊರಿನ ಜನರು ತುಂಬಾ ಆಶ್ಚರ್ಯಕರವಾಗಿ ನಿಂತು ನೋಡುತ್ತಿದ್ದರು. ಹಾಗೂ ಊರಿನ ನ್ಯಾಯ ಪಂಚಾಯಿತಿಗಳಿಗೆ ಈ ಕುಟುಂಬದವರನ್ನು ಕರೆದು ನ್ಯಾಯ ಪಂಚಾಯಿತಿಯನ್ನು ಮಾಡಿಸಿಕೊಳ್ಳುತ್ತಿದ್ದರು. ರುಮಾಲೆ ಕರಿಬಸಪ್ಪನಿಂದ ರುಮಾಲೆ ಪಾಪಣ್ಣನವರೆಗೂ ರುಮಾಲೆ ಸುತ್ತಿಕೊಂಡು ನೋಡಗರ ಮನಸ್ಸನ್ನು ಸೆಳೆಯುವಂತೆ ಮಾಡಿದ್ದಾರೆ. ಆದ ಕಾರಣ ಅಂದಿನಿಂದ ಇವರ ಕುಟುಂಬಕ್ಕೆ ರುಮಾಲೆ ಎಂಬ ಹೆಸರು ನಾಮಕರಣವಾಯಿತು ಎಂಬ ಅಭಿಪ್ರಾಯ ರುಮಾಲೆ ನಾಗರಾಜು ಅವರದು.

**ಜನನ, ಬಾಲ್ಯಜೀವನ ಮತ್ತು ಪ್ರಾಥಮಿಕ ಹಾಗೂ ಕಲಾಶಿಕ್ಷಣ**

"ರುಮಾಲೆ ಚನ್ನಬಸವಯ್ಯನವರು ಬೆಂಗಳೂರು ಜಿಲ್ಲೆಯ ದೊಡ್ಡಬಳ್ಳಾಪುರದಲ್ಲಿ ಸೆಪ್ಟೆಂಬರ್ ೧೦, ೧೯೧೦ರಂದು ಗಣೇಶನ ಹಬ್ಬದ ದಿನದೊಂದು ರುಮಾಲೆ ಎಂಬ ಮನೆತನದಲ್ಲಿ ಜನ್ಮತಾಳಿದರು. ಇವರ ತಂದೆ ರುಮಾಲೆ ಕರಿಬಸಪ್ಪ ತಾಯಿ ಶ್ರೀಮತಿ ಗೌರಮ್ಮನವರು. ಈ ದಂಪತಿಗಳಿಬ್ಬರು ತುಮಕೂರಿನ ಗುಬ್ಬಿ ಚನ್ನಬಸವೇಶ್ವರ ಸ್ವಾಮಿ ದೇವರ ಆರಾಧಕರಾಗಿದ್ದರು. ಪೂಜೆ ಪುರಸ್ಕಾರಗಳನ್ನು ಹೊಂದಿದ ಸುಸಂಸ್ಕೃತ ಮತ್ತು ಸ್ವಾಭಿಮಾನದ ವ್ಯಕ್ತಿಗಳಾಗಿದ್ದರು. ರುಮಾಲೆ ಅವರು ಶ್ರೀ ಶ್ರೀ ಶ್ರೀ ತಪಸ್ವೀಜಿ ಮಹಾರಾಜ್ ಹಾಗೂ ಶ್ರೀ ಶ್ರೀ ಶ್ರೀ ಶಿವಬಾಲಯೋಗಿ ಸ್ವಾಮಿಜಿಯವರಲ್ಲಿ ಒಟ್ಟು ಎಂಟು ವರ್ಷಗಳ ಕಾಲ ಅವರುಗಳ ಸೇವೆ ಮಾಡಿಕೊಂಡು ಬಂದವರು. ಸ್ವಾತಂತ್ರ್ಯ ಚಳುವಳಿಕಾರರಾಗಿ ತಾಯಿನಾಡು ದಿನಪತ್ರಿಕೆಯ ಸಂಪಾದಕರಾಗಿ ಆಗಿನ ಮೈಸೂರು ರಾಜ್ಯದ ಕಾಂಗ್ರೆಸ್ ಸೇವಾದಳ ಮತ್ತು ಭಾರತ್ ಸೇವಾದಲಗಳ ವ್ಯವಸ್ಥಾಪಕ ಕಾರ್ಯದರ್ಶಿಯಾಗಿ ಹಲವು ಕ್ಷೇತ್ರಗಳಲ್ಲಿ ನಿಸ್ವಾರ್ಥವಾಗಿ ಸೇವೆ ಸಲ್ಲಿಸಿದ ಧೀಮಂತ ವ್ಯಕ್ತಿ".[೨]

**ಬಾಲ್ಯ ಜೀವನ**

ರುಮಾಲೆ ಅವರು ಬಾಲಕನಿದ್ದಾಗ ಆಟಪಾಠಗಳಲ್ಲಿ ಬಳಸಿಕೊಂಡಿರುವ ಕಲಾ ಅಭಿವ್ಯಕ್ತಿ ಬಾಲಕನ ಮೇಲೆ ಬೀರಿದ ಸಾಂಸ್ಕೃತಿಕ ಪರಿಸರದ ಪ್ರಭಾವ ಬಾಲ್ಯದಿಂದಲೇ ಇವರಿಗೆ ಕಲೆಯಲ್ಲಿ ಹೆಚ್ಚು ಆಸಕ್ತಿ ಹೊಂದಿದವರು. ಇದರ ಪರಿಣಾಮವಾಗಿ ಪ್ರಭಾವ ಬೀರಿದ ಸೌಂದರ್ಯ ಪ್ರಜ್ಞೆ ಈ ಎಲ್ಲಾ ವಿಷಯಗಳು

೨. ರುಮಾಲೆ ಚನ್ನಬಸವಯ್ಯ ಕರ್ನಾಟಕ ಕಲಾವಿದರ ಮಾಲೆ ೩೧, ಲ.ಕ, ಅಕಾಡೆಮಿ, ೧೯೯೦

ರುಮಾಲೆ ಚೆನ್ನಬಸವಯ್ಯನವರಿಗೆ ಖ್ಯಾತ ಕಲಾವಿದರಾಗಿ ಬೆಳೆಯಲು ಪ್ರೇರಣೆ ನೀಡಿವೆ. ಇವರು ಪ್ರಕೃತಿಯ ಪ್ರೀಯರು. ಚಿಕ್ಕ ವಯಸ್ಸಿನಿಂದಲೆ ಗಿಜಾಡುವಿಕೆಯ ಹಂತದಿಂದಲೂ ಅವರ ಮನಸ್ಸಿಗೆ ತೊಚಿದಂತೆ ಪ್ರಕೃತಿಯ ಚಿತ್ರಗಳನ್ನು ರಚಿಸುತ್ತಿದ್ದರು. ಅದು ಚೆನ್ನಾಗಿ ಬಂದರೆ ಅದನ್ನು ಬಾಲ್ಯದ ಗೆಳೆಯರಿಗೆ ತೋರಿಸುತ್ತಾ ಖುಷಿ ಪಡುತ್ತಿದದರು. ಹಾಗೂ ಇವರ ಮನೆತನದಲ್ಲಿ ದೇವರ ಆರಾಧಕರಾಗಿರುವುದರಿಂದ ಅವರ ಮನೆಯಲ್ಲಿ ದೇವರ ಚಿತ್ರಪಟಗಳನ್ನು ನೋಡಿ ಅದರಂತೆ ನೋಡಿಕೊಂಡು ಯಥಾವತ್ತಾಗಿ ಮರುಕೃತಿಯಾಗಿ ಚಿತ್ರಿಸುತ್ತಿದ್ದರು. ಮತ್ತು ಅದರಲ್ಲಿ ಇರುವಂತಹ ಬಣ್ಣಗಳನ್ನು ಗಮನಿಸಿ ಅದರಂತೆಯೇ ಬಣ್ಣಗಳನ್ನು ತುಂಬಿ ಆನಂದಿಸುತ್ತಿದ್ದರು. ಹಾಗೆಯೇ ಅವರ ಕುಟುಂಬದವರಿಗೂ ಹಾಗೂ ಅವರ ಸ್ನೆಹಿತರಿಗೂ ತೋರಿಸಿ ಎಲ್ಲರನ್ನು ಖುಷಿಪಡಿಸುವ ಹವ್ಯಾಸ ಅಂದಿನ ದಿನಗಳಲ್ಲಿ ಇತ್ತು. ಹೀಗೆ ಕಾಲಕ್ರಮೇಣ ತಮಗೆ ಅರಿವಿಲ್ಲದೆಯೆ ಕಲೆಯು ಮೈಗೂಡಿತು.

**ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ :** "ರುಮಾಲೆ ಚನ್ನಬಸವಯ್ಯವರು ಪ್ರಾಥಮಿಕ ಹಂತದಲ್ಲಿ ಆಟಪಾಠಗಳ ಜೊತೆಯಲ್ಲಿ ಚಿತ್ರಕಲೆಯನ್ನು ಮೈಗೂಡಿಸಿಕೊಂಡವರು. ಪಠ್ಯದಲ್ಲಿ ಬರುವ ಎಲ್ಲಾ ತರಹದ ಚಿತ್ರಗಳನ್ನು ನೋಡಿಕೊಂಡು ಬರೆಯುವ ಅಭ್ಯಾಸ ಮಾಡುತ್ತಿದ್ದರು. ಅಲ್ಲದೆ ಅವರ ಸಹಪಾಠಿಗಳಿಗೂ ಕೂಡ ಪಠ್ಯಪುಸ್ತಕದಲ್ಲಿ ಬರುವಂತೆ ಚಿತ್ರಗಳನ್ನು ಬರೆದು ಕೊಡುತ್ತಿದ್ದರು. ಇನ್ನುಳಿದ ತರಗತಿಯ ವಿದ್ಯಾರ್ಥಿಗಳು ಇವರ ಕೈಯಿಂದ ಚಿತ್ರ ಬರೆಯಿಸಿಕೊಳ್ಳಲು ಅವರಲ್ಲೇ ನಾಮುಂದು ತಾಮುಂದು ಎಂಬ ಪೈಪೋಟಿ ಮಾಡುತ್ತಿದ್ದರು. ಹೀಗೆ ಎಲ್ಲಾ ಸಹಪಾಠಿಗಳಿಗೂ ಚಿತ್ರಗಳನ್ನು ಬರೆದು ಕೊಡುತ್ತಿದ್ದರು. ವಿದ್ಯಾಭ್ಯಾಸದಲ್ಲಿ ಸ್ವಲ್ಪಮಟ್ಟಿಗೆ ಆಸಕ್ತಿ ಕಡಿಮೆ ಇತ್ತೆಂದು ಹೇಳಿದರೆ ತಪ್ಪಾಗಲಾರದು.

ಕಲೆಯ ಆವರಣದಲ್ಲಿ ಆಟವಾಡುವ ಸಮಯದಲ್ಲಿ ಆಟಗಳನ್ನು ಆಡುತ್ತಿದ್ದರು ಅವರಿಗೆ ಆಟವಾಡಲು ಇಷ್ಟವಿಲ್ಲವೆಂದರೆ ಅದೇ ಆಟದ ಮೈದಾನದಲ್ಲಿ ಕುಳಿತು ಚಿತ್ರ ರಚನೆ ಮಾಡುತ್ತಿದ್ದರು. ಹೀಗೆ ಚಿಕ್ಕಂದಿನಿಂದಲೆ ಕಲೆಯ ಬಗ್ಗೆ ಆಸಕ್ತಿ ಬೆಳೆಯಿತು. ಶಾಲೆಯ ಶಿಕ್ಷಕರಿಂದ ಒಳ್ಳೆಯ ವಿದ್ಯಾರ್ಥಿ ಎಂಬ ಪಟ್ಟವನ್ನು ತೆಗೆದುಕೊಂಡವರು. ಅಲ್ಲದೆ ಪ್ರೌಢವ್ಯವಸ್ಥೆಯಲ್ಲಿದ್ದಾಗಲೆ ಇವರಿಗೆ ದೇಶಪ್ರೇಮ ಮೂಡಿತು. ಇವರು ಪ್ರೌಢಶಾಲೆಯ ಎರಡನೇ ವರ್ಷದವರಿಗೆ ಮಾತ್ರ ವಿದ್ಯಾಭ್ಯಾಸವನ್ನು ಮಾಡಿದರು. ಇದರ ಜೊತೆಯಲ್ಲೇ ಇವರಿಗೆ ದೇಶಪ್ರೇಮವೂ ಬೆಳೆಯಿತು. ಇವರು ಸರಿಸುಮಾರು ಹದಿನಾಲ್ಕು ಹದಿನೈದನೆ ವಯಸ್ಸಿನಲ್ಲೇ ದೇಶ ಪ್ರೇಮದಿಂದ ಮನೆಯನ್ನು ಬಿಟ್ಟು ಹೊರಬಂದರು. ನಂತರ ೧೯೩೪-೩೫ರಲ್ಲಿ ಚಾಮರಾಜೇಂದ್ರ ತಾಂತ್ರಿಕ ಶಾಲೆಯಲ್ಲಿ ಕಲಾ ಅಭ್ಯಾಸ ಮುಂದುವರಿಸಿದರು".[೮]

---

೮. ಎ. ಸಂಜಯ ಕಬೆ (ರು.ಚ. ಗ್ಯಾಲರಿ) ಮೇಲ್ವಿಚಾಕರು, ಸಂದರ್ಸನ ಅಗಸ್ಟ್ ೨೦೦೯

**ಕಲಾ ಶಿಕ್ಷಣ :** "ನಮ್ಮ ಬದುಕನ್ನು ಸರ್ವಾಂಗ ಸುಂದರವನ್ನಾಗಿ ಮಾಡಿಕೊಂಡು ಬಹುಜನ ಹಿತಾಯ ಬಹುಜನ ಸುಖಾಯವಾದ ಬಾಳನ್ನು ಸಾಗಿಸಬೇಕಾದರೆ ಶಿಕ್ಷಣ ಅವಶ್ಯ". ಮನು ಹೇಳಿರುವಂತೆ 'ವಿದ್ಯೆ ಅಥವಾ ಶಿಕ್ಷಣವಿಲ್ಲದ ಮನುಷ್ಯ ಪಶುವಿಗೆ ಸಮಾನ'ವೆನ್ನುವುದು ಶಿಕ್ಷಣದ ಮಹತ್ವ ಎಂಥದು ಎಂಬುದು ತಿಳಿಯುತ್ತದೆ. ಮಾನವನ ಜೀವನ ಮುಖ್ಯವಾಗಿ ತನು, ಮನ, ಆತ್ಮಗಳೆಂಬ ಮೂರು ಅಂಶಗಳನ್ನು ಹೊಂದಿದೆ. ಶಿಕ್ಷಣವು ಇವುಗಳನ್ನು ಸಂಸ್ಕರಿಸುವ ಕಾರ್ಯವನ್ನು ಸದಾ ಕಾಲವು ಮಾಡುತ್ತಿರುತ್ತದೆ. ತನ್ನೊಂದಿಗೆ ಬೇಕಾದ ಅವಶ್ಯ ವಸತಿ ಸಂಸ್ಕಾರಕ್ಕೆ ಬೇಕಾದ ಉಪಜೀವನದ ಮಾರ್ಗವನ್ನು ಮನಸ್ಸಿನ ವಿಕಾಸನಕ್ಕಾಗಿ ಸಾಹಿತ್ಯ, ಕಲೆ, ನೈತಿಕ, ಮೌಲ್ಯಗಳನ್ನು ಆತ್ಮದ ಉದ್ಧಾರಕ್ಕಾಗಿ ಧರ್ಮ ಆಧ್ಯಾತ್ಮ ಪಾರಮಾರ್ಥಿಕ ಮೌಲ್ಯಗಳನ್ನು ನೀಡುವುದೆ ನಿಜವಾದ ಶಿಕ್ಷಣ (ಸಮಗ್ರ ಶಿಕ್ಷಣ). ಈ ರೀತಿಯ ವಿದ್ಯಾ ಪ್ರಸಾರದಿಂದ ಕರ, ಉರ, ಶಿರಗಳ ಸಂವರ್ಧನೆ ಯಾಗುವುದು 'ಕರ'ವು ಕಾರ್ಯವನ್ನು 'ಉರ'ವು ಹೃದಯವನ್ನು 'ಶಿರವು' ಅರಿವನ್ನು ಸೂಚಿಸಲಾಗುತ್ತದೆ. ಶಿಕ್ಷಣವು ದೇಹಕ್ಕೆ ಪುಷ್ಠಿಯನ್ನು ಮನಕ್ಕೆ ವೈಶಲ್ಯತೆಯನ್ನು, ಆತ್ಮಕ್ಕೆ ಆನಂದವನ್ನು ಕೊಟ್ಟು ಅಂತಃಕರಣವನ್ನು ಅರಳಿಸಿ ಸದ್ಗುಣಗಳನ್ನು ಮೈಗೂಡಿಸಿಕೊಂಡು ಬರಲು ಇದು ಪ್ರೇರಣೆಯನ್ನು ನೀಡುತ್ತದೆ. ಹೀಗಾಗಿ ಶಿಕ್ಷಣಕ್ಕೆ ಕೂಡವಷ್ಟು ಮಹತ್ವವನ್ನು ಇನ್ನಾವುದೇ ವಿಷಯಕ್ಕೆ ಕೊಡುವುದಿಲ್ಲ. ಇದು ಶಿಕ್ಷಣದ ಜ್ಞಾನದ ವೈಶಾಲ್ಯತೆಗೆ ಸಾಕ್ಷಿಯಾಗಿದೆ."[೯]

"ಭಗವದ್ಗೀತೆಯು ಇತಿಹಾಸವನ್ನು "ಪ್ರಜ್ವಲಿತೋಜ್ಞಾನಮಯಃ ಪ್ರದಿಪಃ" ಎಂದು "ನಹಿಜ್ಞಾನೇನ ಸದೃಶಃ ಪವಿತ್ರ ಮಹವಿದ್ಯತೆ" ಎಂದೂ ಜ್ಞಾನವನ್ನು ಬಾಯಿ ತುಂಬಾ ಹೊಗಳಿದೆ. "ಮನುಷ್ಯನ ಜೀವನವು ಸುಸಂಸ್ಕೃತವೂ ಸುಖಮಯವೂ ಆಗಿರಬೇಕಾದರೆ ಆತ ಜ್ಞಾನವಂತನಾಗಬೇಕಾಗುತ್ತದೆ. ಈ ಜ್ಞಾನವನ್ನು ಕೊಡುವುದಕ್ಕೆ ಇಲ್ಲವೇ ಪಡೆಯುವುದಕ್ಕೆ ವಿದ್ಯೆ ಅಥವಾ ಶಿಕ್ಷಣ"ವೆಂದು ಕರೆಯಬಹುದೆಂಬ ಡಾ. ಎಸ್.ಸಿ. ಪಾಟೀಲರ ಮಾತುಗಳು ತುಂಬಾ ಅರ್ಥಪೂರ್ಣವಾದವುಗಳಾಗಿವೆ"

"ರುಮಾಲೆ ಚನ್ನಬಸವಯ್ಯನವರು ಮೊದಲಿಗೆ ೧೯೨೯ ರಿಂದ ೩೦ರವರೆಗೆ ಬೆಂಗಳೂರಿನ ಕಲಾಮಂದಿರಲ್ಲಿ ಕಲಾ ಅಭ್ಯಾಸವನ್ನು ಮಾಡಲು ಹೊರಟರು. ಅದೊಂದು ಕಲಾಶಾಲೆಯಲ್ಲಿ ಒಂದು ವರ್ಷದ ಕಲಾ ಅಭ್ಯಾಸವನ್ನು ಮುಗಿಸಿದ ನಂತರ ೧೯೩೦ ರಿಂದ ೩೧ರವರೆಗೆ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಬಿಜಾಪುರ ಮತ್ತು ವಿಸಾಪುರಗಳಲ್ಲಿ ಒಂಭತ್ತು ತಿಂಗಳು ರಾಜಕೀಯ ಖೈದಿಯಾಗಿ ಜೈಲುವಾಸ ಅನುಭವಿಸುತ್ತಾರೆ. ಜೈಲುವಾಸ ಅನುಭವಿಸುವ ಸಂದರ್ಭದಲ್ಲಿ ಜೈಲಿನಲ್ಲಿಯೇ ಕೂತು ಚಿತ್ರಗಳನ್ನು ಬರೆಯುತ್ತಾರೆ. ಇವರ ಚಿತ್ರಕಲೆಯ ಆಸಕ್ತಿಯನ್ನು ಕಂಡು ಮಹಾತ್ಮಗಾಂಧೀಜಿ ಮತ್ತು

---

೯. ಚಿತ್ರಕಲಾವಿದ ಡಾ. ಎಸ್.ಸಿ. ಪಾಟೀಲ ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು, ಪು.

ಟಿ. ಸಿದ್ದಲಿಂಗಯ್ಯ ಹಾಗೂ ಕೆಂಗಲ್ ಹನುಮಂತಯ್ಯ ಇವರುಗಳು ನಿನಗೆ ಕಲೆಯ ಬಗ್ಗೆ ಹೆಚ್ಚು ಶ್ರದ್ಧೆ ಇದೆ. ನೀನು ಇದನ್ನು ಬಿಡಬೇಡ ದಯವಿಟ್ಟು ಮುಂದುವರೆಸು ಎಂದು ಹೇಳಿ ನಂತರ ಅದಕೋಸ್ಕರ ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಗೆ ಸೇರಿಕೊಳ್ಳಲು ಪ್ರೋತ್ಸಾಹ ಕೊಡುತ್ತಾರೆ. ಇದರಿಂದ ಇವರೆಲ್ಲರ ಪ್ರೋತ್ಸಾಹಗಳಿಂದ ರುಮಾಲೆ ಅವರು ೧೯೩೪ರಲ್ಲಿ ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಯಲ್ಲಿ ತೈಲ ಚಿತ್ರಣದ ವಿಶೇಷ ಅಧ್ಯಯನವನ್ನು ಕೈಗೊಳ್ಳುತ್ತಾರೆ.''[೧೦] ಇಲ್ಲಿ ಇವರು ತೈಲಮಾಧ್ಯಮಗಳಲ್ಲಿ ಅಕಾಡೆಮಿಕ್ಕಾಗಿ ಕೃತಿ ರಚನೆ ಮಾಡುತ್ತಾರೆ. ನಂತರದ ದಿನಗಳಲ್ಲಿ ಇವರಿಗೆ ಪ್ರಕೃತಿಯ ಬಗ್ಗೆ ಹೆಚ್ಚು ಒಲವು ಇದುದ್ದರಿಂದ ನಂತರದ ದಿನಗಳಲ್ಲಿ ಇವರು ಪ್ರಕೃತಿಗಳ ಚಿತ್ರಣಗಳನ್ನು ತೈಲಮಾಧ್ಯಮಗಳಲ್ಲಿ ರಚನೆ ಮಾಡುವುದನ್ನು ಅಭ್ಯಾಸ ಮಾಡುತ್ತಾರೆ.

"ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಶಾಲೆಯಲ್ಲಿ ಅಲ್ಲಿಯ ಕಲಾ ಗುರುಗಳಿಂದ ಹೆಚ್ಚಿನ ವಿಷಯವನ್ನು ತಿಳಿದುಕೊಳ್ಳುತ್ತಾರೆ. ಅಲ್ಲದೇ ಅಲ್ಲಿಯ ಕಲಾ ಶಿಕ್ಷಣದ ಸಹಪಾಠಿಗಳಿಗೂ ಮತ್ತು ಆ ಒಂದು ಕಲಾಶಾಲೆಯ ಕಲಾ ಗುರುಗಳಿಗೂ ನೆಚ್ಚಿನ ವಿದ್ಯಾರ್ಥಿಯಾಗುತ್ತಾರೆ. ಕಲಾ ಅಭ್ಯಾಸ ಮಾಡುವ ಸಂದರ್ಭದಲ್ಲಿ ಕಲಾ ಪ್ರದರ್ಶನಗಳು ನಡೆಯುತ್ತವೆ. ಇವರು ಕೂಡ ಅಂತಹ ಕಲಾಪ್ರದರ್ಶನಗಳಲ್ಲಿ ಭಾಗವಹಿಸುತ್ತಿದ್ದರು. ರುಮಾಲೆಯವರು ಕಲಾಶಿಕ್ಷಣ ಮಾಡುವ ಸಂದರ್ಭದಲ್ಲಿ ರುಮಾಲೆಯವರ ಸಮಕಾಲೀನ ಕಲಾವಿದರಗಳಾದ ಎಸ್.ಎಸ್. ಕುಕ್ಕೆ, ನಂಜುಂಡರಾವ್, ಇನಾಮತಿ, ಎನ್.ಎಸ್. ಸುಬ್ಬರಾಯಿ, ಪಿ.ಆರ್. ತಿಪ್ಪೇಸ್ವಾಮಿ, ಇತರೆ ಕಲಾವಿದರುಗಳು ಇವರ ಸಮಕಾಲೀನ ಕಲಾವಿದರು ಗಳಾಗಿದ್ದರು".[೧೧]

"ಈ ಒಂದು ಕಲಾಶಾಲೆಯಲ್ಲಿ ಹೆಚ್ಚಿನ ವಿದ್ಯಾರ್ಥಿಗಳು ಶ್ರೀಮಂತ ಕುಟುಂಬದವರೆ ಇಲ್ಲಿ ಕಾಣುತ್ತಾರೆ. ಹಾಗೆಂದ ಕೂಡಲೆ ಇಲ್ಲಿ ಬಡವಿದ್ಯಾರ್ಥಿಗಳಿಗೆ ಅವಕಾಶ ಇಲ್ಲವೆಂದಲ್ಲಾ. ಅಂಥವರು ಬೆರಳೆಣಿಕೆಯಷ್ಟು ಜನ ಮಾತ್ರ. ಅಂಥವರಲ್ಲಿ ಕೆಲವು ಬಡ ವಿದ್ಯಾರ್ಥಿಗಳು ಇಲ್ಲಿಯ ಕಲಾ ಶಿಕ್ಷಣ ಪಡೆದು ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ತಮ್ಮಗಳ ಹೆಸರು ಗಳಿಸಿಕೊಂಡಿದ್ದಾರೆ. ಈ ಕಲಾಶಾಲೆಯ ನಿಯಮಗಳು ಬಾಂಬೆ ಜೆ.ಜೆ. ಕಲಾಶಾಲೆಗೆ ಹೋಲಿಸಿದರೆ ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆ ಬಡವಿದ್ಯಾರ್ಥಿಗಳಿಗೆ ಅವಕಾಶ ಕಲ್ಪಿಸಿ ಕೂಡುತ್ತಿತ್ತು. ಹಾಗೂ ಕಲಾಶಾಲೆಯ ನಿಯಮಗಳು ಸ್ವಲ್ಪ ಸಡಿಲ ಎಂದು ಹೇಳಬಹುದು. ಇಲ್ಲಿಯ ವಿದ್ಯಾರ್ಥಿಗಳು ರೇಖಾಚಿತ್ರಗಳನ್ನು ರಚಿಸಲೇಬೇಕಿತು. ಸಮಯಕ್ಕೆ ಸರಿಯಾಗಿ ಆಯಾ ವಿಭಾಗದ ವಿದ್ಯಾರ್ಥಿಗಳು ಸರಿಯಾಗಿ ವಿಭಾಗದಲ್ಲಿರಬೇಕು. ಪ್ರತಿದಿನ ಮನೆಗೆಲಸವನ್ನು ನೀಡಿರುವುದನ್ನು ಅವರುಗಳು ಮುಗಿಸಲೇಬೇಕಿತ್ತು. ವಿದ್ಯಾರ್ಥಿಗಳು ಶಿಸ್ತು

---

೧೦. ಮದುರಸಿರಿ, ದೊಡ್ಡಬಳ್ಳಾಪುರ ತಾಲೂಕು ೬ನೇ ಕನ್ನಡ ಸಾಹಿತ್ಯ ಸಮ್ಮೇಳನ, ೨೦೦೬ ಪು.೪-೫

೧೧. ಎಂ.ಬಿ. ಪಾಟೀಲರು (ಕಲಾವಿದರು) ಸಂದರ್ಶನ ಸೆಪ್ಟೆಂಬರ್, ೨೦೦೯

ಸಂಯಮದಿಂದ ಕೂಡಿದ ಚಿತ್ರಕಲಾ ಮಂದಿರವಾಗಿತ್ತು. ಹಾಗೆಯೇ ಈ ಕಲಾಮಂದಿರದಲ್ಲಿ ಚಿತ್ರಕಲಾ ಪ್ರದರ್ಶನಗಳು, ಶೈಕ್ಷಣಿಕ ಪ್ರವಾಸ, ಸಾಂಸ್ಕೃತಿಕ ಚಟುವಟಿಕೆಗಳು ಹೀಗೆ ಹತ್ತು ಹಲವು ಕಲಾ ಚಟುವಟಿಕೆಗಳು ನಿರಂತರವಾಗಿ ನಡೆಯುತ್ತಿರುವ ಕಲಾ ಮಂದಿರವಾಗಿತ್ತು. ಇಲ್ಲಿನ ವಾತಾವರಣವೇ ಕಲಾ ವಿದ್ಯಾರ್ಥಿಗಳಿಗೆ ಕಲಾವಿದರುಗಳಿಗೆ ಸ್ಫೂರ್ತಿಯ ಸೆಲೆಯಾಗಿತ್ತು. ಇವೆಲ್ಲವುಗಳ ಜೊತೆ ಜೊತೆಯಲ್ಲಿ ಪ್ರತಿ ವರ್ಷ ವಾರ್ಷಿಕ ಚಿತ್ರಕಲಾ ಪ್ರದರ್ಶನ ನಡೆಸಿ ಅವುಗಳಲ್ಲಿ ಉತ್ತಮ ಕಲಾಕೃತಿಗೆ ಬಹುಮಾನ ನೀಡಲಾಗುತ್ತಿತ್ತು. ಹಾಗೂ ವಿದ್ಯಾರ್ಥಿಗಳ ಕಲಾಕೃತಿಗಳ ಕಲಾ ಪ್ರದರ್ಶನಗಳ್ನು ರಾಷ್ಟ್ರೀಯ ಮತ್ತು ಅಂತರರಾಷ್ಟ್ರಿಯ ಮಟ್ಟದಲ್ಲಿ ಪ್ರದರ್ಶನ ಮಾಡಲು ಕಲಾಶಾಲೆಯವರೇ ಜವಾಬ್ದಾರಿ ಹೊತ್ತು ಕೊಳ್ಳುತ್ತಿದ್ದರು. ಹೀಗೆ ಕಲಾಶಾಲೆಯ ವಿದ್ಯಾರ್ಥಿಗಳಿಗೆ ಕಲಾ ಸಂಸ್ಥೆಯವತಿಯಿಂದ ಮತ್ತು ಕಲಾಶಿಕ್ಷಕರು ಗಳಿಂದ ಒಳ್ಳೆಯ ಕಲಾವಿದ್ಯಾಭ್ಯಾಸ ಸಿಗುತ್ತಿತ್ತು. ಆದರೆ ಪರಿಕ್ಷೆಗೆ ಮಾತ್ರ ಬಾಂಬೆ ಜೆ.ಜೆ.ಕಲಾಶಾಲೆಗೆ ಹೋಗಬೇಕಿತ್ತು."[೧೨]

"ಆ ಸಮಯದಲ್ಲಿ ಕರ್ನಾಟಕದ ಎಲ್ಲಾ ಕಲಾಶಾಲೆಗಳು ಬಾಂಬೆ ಅಥವಾ ಮದ್ರಾಸ್ ಕಲಾಶಾಲೆಗೆ ಪರೀಕ್ಷೆ ಬರೆಯಲು ಹೋಗಬೇಕಾಗಿತ್ತು. ಆಗ 'ಪೆಡರೇಷನ್' ಎಂಬ ಕೋರ್ಸ್ ಇತ್ತು. ಕರ್ನಾಟಕವನ್ನು ಆಗ ಮೈಸೂರು ರಾಜ್ಯ ಎಂದು ಕರೆಯುತ್ತಿದ್ದರು. ಆ ಸಮಯದಲ್ಲಿ ಕರ್ನಾಟಕದ ಕಲಾಶಾಲೆಯಲ್ಲಿ ೩ನೇ ವರ್ಷದವರೆಗೆ ಮಾತ್ರ ಕಲಿತು ಮುಂದಿನ ವಿದ್ಯಾಭ್ಯಾಸಕ್ಕೆ ಅಂದರೆ, ೨ ವರ್ಷಕ್ಕೆ ಜೆ.ಜೆ. ಕಲಾಶಾಲೆಗೆ ಹೋಗಬೇಕಿತ್ತು. ಮೂರು ವರ್ಷದ ಡಿಪ್ಲೋಮಾವನ್ನು ಕರ್ನಾಟಕ ಪ್ರೌಢಶಿಕ್ಷಣ ಮಂಡಳಿಗೆ ಒಪ್ಪಿಸಿದರು. ಕರ್ನಾಟಕದಲ್ಲಿ ೩ನೇ ವರ್ಷದ ಡಿಪ್ಲೋಮಾ ಮಾಡಿದ ವಿದ್ಯಾರ್ಥಿ ಜೆ.ಜೆ. ಕಲಾಶಾಲೆಯಲ್ಲಿ ಮೊದಲನೆಯ ವರ್ಷದ ವಿದ್ಯಾರ್ಥಿಗಳಂತೆ ಇತ್ತು. ಅಲ್ಲಿಗೆ ಹೋಗಿ ಇರಲು ಆಗದಿರುವಂತಹ ವಿದ್ಯಾರ್ಥಿಗಳಿಗೆ ಕನಿಷ್ಠ ಮೂರು ತಿಂಗಳ ಹಾಜರಾತಿಯನ್ನು ಕೊಡಬೇಕಿತ್ತು. ಒಮ್ಮೆ ಹೋದಾಗ ಹದಿನೈದು ದಿನ, ನಾಲ್ಕು ದಿನ ಅಥವಾ ಎಂಟು ದಿನಗಳು ಹೀಗೆ ಒಟ್ಟಾರೆ ಕೌಂಟ್‌ಮಾಡಿ ಮೂರು ತಿಂಗಳ ಹಾಜರಾತಿಯನ್ನು ಕೊಡಬೇಕಿತ್ತು. ಕರ್ನಾಟಕದ ಕಲಾಶಾಲೆಗಳು ಧಾರವಾಡ ಹಾಲಭಾವಿ ಕಲಾಶಾಲೆ, ಗದಗ ವಿಜಯ ಕಲಾಮಂದಿರ, ಮೈಸೂರು ಕಾವ ಕಲಾಶಾಲೆ ಹೀಗೆ ಇತ್ಯಾದಿ ಕಲಾಶಾಲೆಗಳು. ಕಲ್ಕತ್ತಾ, ಮದ್ರಾಸ್, ಬಾಂಬೆ ಹೀಗೆ ಹೊರ ರಾಜ್ಯಗಳಿಗೆ ಹೋಗಿ ಪರೀಕ್ಷೆ ಬರೆಯಬೇಕಾಗಿತ್ತು. ನಂತರದ ದಿನಗಳಲ್ಲಿ ಕರ್ನಾಟಕದಲ್ಲಿ ಐದು ವರ್ಷದ ಡಿಪ್ಲೋಮಾ ಕೋರ್ಸ್ ತಂದು ಇಲ್ಲಿಯೇ ಪರೀಕ್ಷಾ ಕೇಂದ್ರ(ಸೆಂಟರ್)ಗಳನ್ನು ತಂದರು. ರುಮಾಲೆಯವರು ಕಲಾ ಅಭ್ಯಾಸ ಮಾಡುವ ಸಂದರ್ಭದಲ್ಲಿ ಇವರು ಬಾಂಬೆ ಜೆ.ಜೆ.ಗೆ ಹೋಗಿ ಪರೀಕ್ಷೆ ಬರೆಯಬೇಕಿತ್ತು."[೧೩]

---

೧೨. ಎಂ.ಬಿ. ಪಾಟೀಲರು (ಕಲಾವಿದರು) ಸಂದರ್ಶನ ಸೆಪ್ಟೆಂಬರ್, ೨೦೦೯

೧೩. ಎಂ.ಬಿ. ಪಾಟೀಲರು (ಕಲಾವಿದರು) ಸಂದರ್ಶನ ಸೆಪ್ಟೆಂಬರ್, ೨೦೦೯

### ಸರ್ ಜೆ.ಜೆ. ಸ್ಕೂಲ್ ಆಫ್ ಆರ್ಟ್‌ನ ಸ್ಥಾಪನೆ

"ಸರ್ ಜೆ.ಜೆ. ಸ್ಕೂಲ್ ಆಫ್ ಆರ್ಟ್ಸ್ ಮುಂಬೈಯಲ್ಲಿ ೧೮೫೭ ಮಾರ್ಚ್ ೨ರಂದು ಸ್ಥಾಪಿಸಲಾಯಿತು. ಈ ಕಲಾಶಾಲೆಗೆ ಮೂಲ ಕಾರಣಪುರುಷ ಪಾರ್ಸಿ ಜನಾಂಗದ ನೇಕಾರರ ಮನೆತನದಲ್ಲಿ ಹುಟ್ಟಿದ ಜೀಜಾಬಾಯಿ ಜೇಮ್‌ಶಡ್ಜಿ. ಇವರು ಹಡಗುಗಳ ನೆಲಹಾಸಿಗೆಗಳನ್ನು ತಯಾರಿಸಿ ಕೊಡುತ್ತಿದ್ದರು. ಅಲ್ಲದೇ ಹೊರ ದೇಶಗಳಿಗೂ ವ್ಯಾಪಾರಕ್ಕಾಗಿ ಹೋಗುತ್ತಿದ್ದರು. ಆಗ ಚೈನಾ ದೇಶದ ಕರಕುಶಲ ಕಲೆಯಿಂದ ಪ್ರಭಾವಿತರಾಗಿ ಅವರ ಮನಸ್ಸಿನಲ್ಲಿ ಹಾಗೆ ಅದು ರೂಪತಾಳುತ್ತಾ ಬಂತು. ೧೮೫೧ರಲ್ಲಿ ಲಂಡನ್‌ನಲ್ಲಿ ಅಂತರಾಷ್ಟ್ರೀಯ ಚಿತ್ರಕಲಾ ಪ್ರದರ್ಶನ ನಡೆದಿತ್ತು. ಅದನ್ನು ನೋಡಲು ಜೀಜಾಬಾಯಿ ಜೇಮ್‌ಶೆಡ್ಜಿ ಅವರೂ ಹೋಗಿದ್ದರು. ಅವರ ಮನಸ್ಸಿನಲ್ಲಿಯೂ ಸಹ ಇಂತಹ ಕಲಾಶಾಲೆಯನ್ನು ನಮ್ಮ ಭಾರತದಲ್ಲೂ ಪ್ರಾರಂಭಿಸಬೇಕೆಂಬ ಇಚ್ಛೆಯಾಯಿತು. ಅದರ ಪರಿಣಾಮವೇ ಇಂದಿನ ಸರ್ ಜೆ.ಜೆ. ಸ್ಕೂಲ್ ಆಫ್ ಆರ್ಟ್ಸ್ ಸ್ಥಾಪನೆಗೊಂಡದ್ದು. ಈ ಕಲಾಶಾಲೆಯು ಲಂಡನ್ನಿನ ರಾಯಲ್ ಅಕಾಡೆಮಿ ಆಫ್ ಆರ್ಟ್ಸ್ ಸಂಸ್ಥೆಯ ಮಾದರಿಯಲ್ಲಿ ಸ್ಥಾಪಿಸಿದರು. ಮತ್ತು ರಾಯಲ್ ಅಕಾಡೆಮಿಯ ಸ್ನಾತಕೋತ್ತರ ಪದವಿ ಪಡೆದವನೇ ಇಲ್ಲಿನ ಡೈರೆಕ್ಟರ್ ಆಗಬೇಕೆಂದು ಕಡ್ಡಾಯ ಹೇರಿಸಿದ್ದರು. ನೈಜಶೈಲಿಯಲ್ಲಿ ಬ್ರಿಟೀಷರು ಸ್ಥಾಪನೆ ಮಾಡಿದ ಸ್ವಾತಂತ್ರ್ಯ ಪೂರ್ವದಲ್ಲಿ ಆರಂಭಗೊಂಡ ಏಕೈಕ ಕಲಾಶಾಲೆ ಇದು. ಇದರ ಸ್ಥಾಪನೆಗೆ ಪಾರ್ಸಿ ಜನಾಂಗದ ಜೀಜಾಬಾಯಿ ಜೇಮ್‌ಶೆಡ್ಜಿಯವರು ಸ್ಥಳವನ್ನು ದಾನ ನೀಡಿದ ಕಾರಣವಾಗಿ ಈ ಸಂಸ್ಥೆಯು ಪ್ರಾರಂಭವಾಗಲು ಸಹಾಯಕವಾಯಿತು."[೧೪]

### ರುಮಾಲೆಯವರಿಗೆ ಸಂಘಸಂಸ್ಥೆಗಳಿಂದ ಸನ್ಮಾನ ಮತ್ತು ಗೌರವ ಪ್ರಶಸ್ತಿಗಳು

ಸಹೃದಯ ಸರಳ ಸಜ್ಜನಿಕೆಯ ನಿಡಾರಂಬರ ನಿರಹಾಂಕಾರದ ಇವರ ನಡೆತೆ ನಾಡಿನ ಜನರು ಸಂಘಸಂಸ್ಥೆಗಳು ಸನ್ಮಾನಿಸಿವೆ. ೧೯೩೫ರಲ್ಲಿ ಕಲ್ಕತ್ತಾದ ಅಕಾಡೆಮಿ ಆಫ್ ಫೈನ್ ಆರ್ಟ್ ಸಂಸ್ಥೆಯಲ್ಲಿ ಚಿತ್ರಕಲಾ ಪ್ರದರ್ಶನದಲ್ಲಿ ಇವರ ನಿಸರ್ಗ ಚಿತ್ರಕ್ಕೆ ಬಹುಮಾನ ಲಭಿಸಿತು. ಈ ಸಂಸ್ಥೆಯವರು ರುಮಾಲೆಯವರಿಗೆ ಬಹುಮಾನ ಮತ್ತು ಪ್ರಶಸ್ತಿ ಪತ್ರವನ್ನು ಗೌರವದೊಂದಿಗೆ ನೀಡಿ ಸನ್ಮಾನಿಸಿದರು. ೧೯೬೦ರಲ್ಲಿ ಮೈಸೂರು ದಸರಾ ಉತ್ಸವದಲ್ಲಿ ಚಿತ್ರಕಲಾ ಪ್ರದರ್ಶನಕ್ಕೆ ರುಮಾಲೆಯವರು ಭಾಗವಹಿಸಿದ್ದರು. ಅಲ್ಲಿಯೂ ಕೂಡ ರಾಜ್ಯಸರ್ಕಾರ ರಾಜ್ಯ ಪ್ರಶಸ್ತಿಯನ್ನು ನೀಡಿ ಅವರನ್ನು ಗೌರವಿಸಿತು. ೧೯೪೬ರಲ್ಲಿ ಕಲ್ಕತ್ತಾದ ಅಕಾಡೆಮಿ ಆಫ್ ಫೈನ್ ಆರ್ಟ್ ಸಂಸ್ಥೆಯು ೧೧ನೇ ವಾರ್ಷಿಕ ಕಲಾಪ್ರದರ್ಶನದಲ್ಲಿ ಬಹುಮಾನವನ್ನು ಅಲ್ಲಿ ಸರ್ಕಾರವು ಬಹುಮಾನ ಮತ್ತು ಪ್ರಶಸ್ತಿ ಪತ್ರವನ್ನು ನೀಡಿ ಅಲ್ಲಿಯ ಸರ್ಕಾರವು ಇವರನ್ನು ಗೌರವಿಸಿತು. ೧೯೭೨ರಲ್ಲಿ ರಾಜ್ಯ ರೈತಕಲಾ ಅಕಾಡೆಮಿ ಪ್ರಶಸ್ತಿ ಇವರಿಗೆ ಸೇರಿತು. ನಂತರ

---

೧೪. ಡಾ. ಲಕ್ಷ್ಮೀದೇವಿ ಗವಾಯಿ, ಎಂ.ಎ.ಚಟ್ಟಿ ಜೀವನ ಹಾಗೂ ಕಲಾಕೃತಿಗಳು, ಪು.೬೪

೧೯೭೨ರಲ್ಲಿ ಕೇಂದ್ರ ಸರ್ಕಾರದಿಂದ 'ತಾಮ್ರಪತ್ರ' ಪ್ರಶಸ್ತಿಯನ್ನು ಕೊಟ್ಟು ಸನ್ಮಾನವನ್ನು ಮಾಡಿ ಗೌರವಿಸಿತು.

**ಕಲಾಪ್ರದರ್ಶನಗಳು**

ರುಮಾಲೆ ಚೆನ್ನಬಸವಯ್ಯನವರ ಕಲಾಪ್ರದರ್ಶನಗಳು ತುಂಬಾ ವಿರಳ ಅವರ ಸಮಯದಲ್ಲಿ ಕಲಾಪ್ರದರ್ಶನಗಳು ತುಂಬಾ ವಿರಳವಾಗಿದ್ದವು ಅವರುಗಳು ಪ್ರದರ್ಶನ ಮಾಡಬೇಕೆಂದರೆ ಕಲ್ಕತ್ತಾ, ಬಾಂಬೆ, ಮೈಸೂರು ದಸರಾ ಉತ್ಸವ ಹೀಗೆ ಇಂತಹ ಸ್ಥಳಗಳಲ್ಲಿ ಮಾತ್ರ ಪ್ರದರ್ಶನಗಳು ನಡೆಯುತ್ತಿದ್ದವು. ಆದಕಾರಣ ರುಮಾಲೆಯವರ ಪ್ರದರ್ಶನಗಳು ಕೆಲವೇ, ಕೆಲವು ಭಾಗದಲ್ಲಿ ಪ್ರದರ್ಶನಗಳಾಗಿದ್ದಾವೆ. ಇನ್ನೊಂದು ಕಾರಣವೆಂದರೆ ಅವರಿಗೆ ಇದೊಂದೇ ಕೆಲಸವಲ್ಲ ಅವರು ಹಲವು ಕ್ಷೇತ್ರಗಳಲ್ಲಿ ಕೆಲಸ ನಿರಾತರಾಗಿ ಇರುವುದರಿಂದ ಪದರ್ಶನಗಳಿಗೆ ಸಮಯ ಸಿಗುತ್ತಿರಲಿಲ್ಲ. ಸ್ವಾತಂತ್ರ್ಯ ಚಳುವಳಿ, ಸೇವಾದಳ ಮೈಸೂರು ರಾಜ್ಯದ ಶಾಸಕರ ಕೆಲಸ ಮತ್ತು ತಾಯಿನಾಡು ಪತ್ರಿಕೆಯ ಸಂಪಾದಕರಾಗಿ ಹೀಗೆ ಎಲ್ಲಾ ಕ್ಷೇತ್ರದಲ್ಲಿ ಮಾಡುವುದರಿಂದ ಅದರ ಒತ್ತಡದಲ್ಲೂ ಬಿಡುವಿನ ಸಮಯದಲ್ಲಿ ಕಲಾಕೃತಿ ರಚನೆ ಮಾಡುತ್ತಿದ್ದರು. ಆದಕಾರಣ ಇವರಿಗೆ ಕಲಾಪ್ರದರ್ಶನ ಮಾಡಲು ಸಮಯ ಸಿಗುತ್ತಿರಲಿಲ್ಲ ಎಂದು ಕಾಣುತ್ತದೆ. ಅವರು ಬೆಂಗಳೂರಿನಲ್ಲೇ ಕೆಲವೆಡೆ ೧೯೬೨ರಿಂದ ೧೯೭೮ರವರೆಗೆ ೧೨ಕ್ಕೂ ಹೆಚ್ಚಿನ ಏಕವ್ಯಕ್ತಿ ಚಿತ್ರಕಲಾಪ್ರದರ್ಶನಗಳನ್ನು ಮಾಡಿಕೊಂಡು ಬೆಂಗಳೂರಿನ ಜನರಿಂದ ಜನ ಮೆಚ್ಚುಗೆ ಪಡೆದರು. ಮತ್ತು ಅಲ್ಲದೆ ೧೯೩೫ರಲ್ಲಿ ಕಲ್ಕತ್ತಾದ ಅಕಾಡೆಮಿ ಆಫ್ ಫೈನ್ ಆರ್ಟ್ ೧೯೪೬ರಲ್ಲಿ ೧೧ನೇ ವಾರ್ಷಿಕ ಕಲಾಪ್ರದರ್ಶನ ಕಲ್ಕತ್ತಾ, ೧೯೬೭ರಲ್ಲಿ ಮೈಸೂರು ದಸರಾ ಕಲಾ ಪ್ರದರ್ಶನ, ೧೯೭೨ರಲ್ಲಿ ರಾಜ್ಯ ರೈತ ಕಲಾ ಅಕಾಡೆಮಿ ಕಲಾ ಪ್ರದರ್ಶನ ಹೀಗೆ ಮಾಡಿಕೊಂಡು ಬಂದರು. ನಂತರದ ದಿನಗಳಲ್ಲಿ ೧೯೭೨ರಿಂದ ರುಮಾಲೆ ಕಲಾ ಗ್ಯಾಲರಿ ಸ್ಥಾಪನೆಯಾಯಿತು. ಅಲ್ಲಿಂದ ಶಾಸ್ವತ ಕಲಾಪ್ರದರ್ಶನವೊಂದರಲ್ಲಿ ಇಂದಿಗೂ ಕಲಾಪ್ರದರ್ಶನಗೊಳ್ಳುತ್ತವೆ.

**ರುಮಾಲೆ ಆರ್ಟ್‌ಗ್ಯಾಲರಿ**

ರುಮಾಲೆ ಚೆನ್ನಬಸವಯ್ಯನವರಿಗೆ ಕಲಾಗ್ಯಾಲರಿಯನ್ನು ಪ್ರಾರಂಭ ಮಾಡಬೇಕೆಂಬ ಹಂಬಲ ಬಹಳ ದಿನಗಳಿಂದ ಇತ್ತು. ಆದರೆ ಅದಕ್ಕೆ ಸಣ್ಣಪುಟ್ಟ ಅಡಚಣೆಗಳು ಬರುತ್ತಿದ್ದವು. ದೇವರಾಜ್ ಅರಸರ ಕಾಲದಲ್ಲಿ ಅವರು ಸಿ.ಎಮ್ ಆಗಿದ್ದಾಗ, ಆ ಸಮಯದಲ್ಲಿ ಅಂದರೆ ೧೯೭೩ರಲ್ಲಿ ರುಮಾಲೆ ಅವರ ಕಲಾಗ್ಯಾಲರಿ ಮಾಡಲು ಅವಕಾಶ ಒದಗಿಬಂತು. ಇದರ ಉದ್ಘಾಟನೆಯನ್ನು ಡಾ.ಎಸ್.ರೋರಿಚ್ ಮತ್ತು ಅವರ ಪತ್ನಿ ದೇವಿಕಾ ರಾಣಿ ರೋರಿಚ್ ಇವರಿಂದ ರುಮಾಲೆ ಆರ್ಟ್‌ಗ್ಯಾಲರಿ ಉದ್ಘಾಟನೆ ಯಾಯಿತು. ಆ ಸಮಯದಲ್ಲಿ ನಾಗರತ್ನಮ್ಮ ಸ್ಪೀಕರ್ ಆಗಿದ್ದರು. ಉದ್ಘಾಟನೆಯ ಸಂದರ್ಭದಲ್ಲಿ ಟಿ.ಪಿ. ಇಸಾರ್ ಅವರು ಕೂಡ ಇದ್ದರು. ರೋರಿಚ್ ಅವರು ಉದ್ಘಾಟನೆಯ ಭಾಷಣದಲ್ಲಿ "ಯಾವುದೇ

ಶ್ರದ್ಧಾವಂತ ಕಲಾವಿದನಿಗೂ, ಅವನು ಬದುಕಿರುವಾಗ ದೊರೆಯಬೇಕಾದ ಮಾನ್ಯತೆ, ಖ್ಯಾತಿ, ಗೌರವಗಳು ದೊರೆಯುವುದು ಕಷ್ಟಸಾಧ್ಯ. ಯಾಕೋ, ಏನೋ ವ್ಯಕ್ತಿಗಳು ನಮ್ಮನ್ನು ಅಗಲಿದ ನಂತರವೇ ನಮಗೆ ಅವರ ಖ್ಯಾತಿಯ ಅರಿವಾಗುತ್ತದೆ. ಇದು ಸಾಮಾನ್ಯ ವರ್ತನೆಯೇ ಆದರೂ ಸಮಾಜ ಕಲಾವಿದನ ಬಗ್ಗೆ ಪ್ರದರ್ಶಿಸಬೇಕಾದ ಸರಿಯಾದ ಸಂಬಂಧವಲ್ಲ.

ಪ್ರತಿಯೊಬ್ಬ ಕಲಾವಿದನಿಗೂ ಅವನ ಕಲೆ ಉಳಿದು ಪ್ರತಿಭೆಗೆ ತಲುಪುವಂತೆ ಸಹಾಯ ದೊರೆಯ ಬೇಕು. ಅರ್ಹರಾದ ಕಲಾವಿದರಿಗೆ ಸಹಾಯ ಮಾಡುವುದರಿಂದ ಅವರು ಸಿಕ್ಕಿಬೀಳಬಹುದಾದ ದುಗಡ ದುಮ್ಮಾನಗಳಿಂದ ಅವರನ್ನು ರಕ್ಷಿಸಬಹುದು ಎಂಬ ಮಾತನ್ನು ಹೇಳಿದ್ದಾರೆ."

ಕರ್ನಾಟಕದ ರಾಜ್ಯಪಾಲರಾದ ಶ್ರೀ ಗೋವಿಂದ ನಾರಾಯಣ್‌ರವರು ೧೫.೦೧.೧೯೭೯ರಂದು ಒತ್ತಿಗೆಯಲ್ಲಿ ಬಿಡುಗಡೆ ಮಾಡುವ ಸಂದರ್ಭದ ಭಾಷಣದಲ್ಲಿ ರುಮಾಲೆಯವರ ಕುರಿತು ಈ ಕೆಳಗಿನಂತೆ ಹೇಳಿದ್ದಾರೆ. ರುಮಾಲೆಯವರೆ ಮತ್ತು ಮಾನ್ಯ ಅತಿಥಿಗಳೇ ಇಂದು ಸಂಜೆ ರುಮಾಲೆಯವರ ಕಲಾಭಾವನವನ್ನು ವೀಕ್ಷಿಸಿದ್ದು, ನನಗೂ ನನ್ನ ಪತ್ನಿಗೂ ಅತೀ ಸಂತೋಷಣದ ಸಂಗತಿ; ನಾವು ಈ ಭವನದಲ್ಲಿರುವ ಅದ್ಭುತ ಕಲಾಕೃತಿಗಳನ್ನು ನೋಡಿ ಸಂತೋಷಪಟ್ಟಿದ್ದೇವೆ. ಶ್ರೀ ರುಮಾಲೆ ಚೆನ್ನಬಸವಯ್ಯ ನವರು ನಮ್ಮಲ್ಲಿ ಒಬ್ಬ ಉನ್ನತ ಕಲಾವಿದರು. ಅವರ ವೈಶಿಷ್ಟ್ಯ ಜಲವರ್ಣಗಳಲ್ಲಿಯೇ ಆದರೂ, ತೈಲವರ್ಣದಲ್ಲಿಯೂ ಪ್ರಭಾವ ಕಲಾಕೃತಿಗಳನ್ನು ಮಾಡಿದ್ದಾರೆ. ಅವರು ನಿಸರ್ಗದ ಮಡಲಲ್ಲಿ ತನ್ಮಯರಾಗಿ ಉಳಿದು ಅದರ ಅನಂತ ಮುಖಗಳನ್ನು ತಮ್ಮ ಕಲಾಪ್ರದರ್ಶನದಲ್ಲಿ ತೋರಿಸಿಕೊಟ್ಟಿದ್ದಾರೆ. ಆಧುನಿಕ ಭಾರತೀಯ ಕಲೆಯಲ್ಲಿ ಅವರ ಕಲಾಕೃತಿಗಳು ಅಮರವಾದವು. ಅವರ ಚಿತ್ರಗಳಲ್ಲಿ ವ್ಯಕ್ತವಾಗುವ ಪ್ರಕೃತಿಯ ಸತ್ವ ಮತ್ತು ಕಾಂತಿ ಯಾರನ್ನೇ ಆದರೂ ಮೆರಗುಗೊಳಿಸುತ್ತವೆ. ಮುಖ್ಯವಾಗಿ ಜೋಗ್ ಜಲಪಾತ, ಲಾಲ್‌ಬಾಗ್‌ನ ವಸಂತ ಋತು ಮುಂತಾದ ದೃಶ್ಯಗಳನ್ನು ರಮ್ಯವಾಗಿ ಚಿತ್ರಿಸಿದ್ದಾರೆ. ಇವರ ಇತ್ತೀಚಿನ ಶ್ರೀಲಂಕಾ ಪ್ರವಾಸದ ಫಲವಾಗಿ ಹಲವಾರು ಸಾಗರ ದೃಶ್ಯಗಳನ್ನು ಸತ್ವಪೂರ್ಣವಾಗಿ ಚಿತ್ರಿಸಿದ್ದಾರೆ. ವ್ಯಕ್ತಿ ಚಿತ್ರಗಳನ್ನು ಮೊದಲು ಮಾಡಿ ಶ್ರೀ ಶಿವಬಾಲಯೋಗಿಗಳ ಚಿತ್ರದಲ್ಲಿ ನಿರ್ಲಿಪ್ತತೆ ಹಾಗೂ ದೈವೀಕತೆಯನ್ನು ತೋರಿಸಿದ್ದಾರೆ. ಕರ್ನಾಟಕದ ಈ ಮಹಾನ್ ಕಲಾವಿದನ ದೃಷ್ಟಿ ಮತ್ತು ಕಲ್ಪನೆಯನ್ನರಿಯಲು ಸಾರ್ವಜನಿಕರಿಗೆ ಸಾಧ್ಯವಾಗುವಂತೆ ಕಲಾಭವನವಿರುವುದು ತೃಪ್ತಿಕರವಾದ ಸಂಗತಿ.

ರುಮಾಲೆ ಚೆನ್ನಬಸವಯ್ಯನವರು ನಮ್ಮ ದೇಶದ ಸ್ವಾತಂತ್ರ್ಯ ಹೋರಾಟಗಾರರು ದೇಶಕ್ಕಾಗಿ ಜೈಲು ವಾಸವನ್ನು ಅನುಭವಿಸಿದ್ದಾರೆ. ೧೯೩೦ರ ನಂತರ ರುಮಾಲೆಯವರು ಸತ್ಯಾಗ್ರಹಿಯಾದರು. ಅವರು ಕಾಂಗ್ರೆಸ್ ಸೇವಾದಳದ ವ್ಯವಸ್ಥಾಪಕರು, ರಾಜ್ಯದ ಭಾರತ ಸೇವಾದಳದ ಸಂಘಟನ ಕಾರ್ಯದರ್ಶಿಯಾಗಿ ಆಗಿದ್ದರು. ಜನಪ್ರಿಯ ದೈನಂದಿನಿಯೊಂದರ ಸಂಪಾದಕರಾಗಿ ೪ ರಿಂದ ೫ ವರ್ಷಗಳಿದ್ದರು. ಹೀಗೆ ಹಲವು ಸ್ಥಾನಗಳಿಂದ ಸೇವೆಯನ್ನು ಮಾಡಿದ್ದಾರೆ.

ರುಮಾಲೆ 'ಆರ್ಟ್‌ಗ್ಯಾಲರಿ' ಎಂಬ ಕಿರುಹೊತ್ತಿಗೆಯನ್ನು ಬಿಡುಗಡೆ ಮಾಡಲು ನನಗೆ ಹೆಚ್ಚಿನ ಸಂತೋಷ. ಅದರಲ್ಲಿ ರುಮಾಲೆಯವರ ಚಿತ್ರಿಸಿರುವ ಹಲವಾರು ಭೂದೃಶ್ಯಗಳು ಮತ್ತು ಶ್ರೀಲಂಕಾದ ಸಾಗರ ದೃಶ್ಯಗಳ ಕೆಲವು ವರ್ಣಚಿತ್ರಗಳಿವೆ. ಜೊತೆಗೆ ನಾನಾ ಕಲಾಭಿಮಾನಿಗಳ ಮತ್ತು ಗಣ್ಯವ್ಯಕ್ತಿಗಳ ವಿಮರ್ಶಾತ್ಮಕ ಅಭಿಪ್ರಾಯಗಳಿಗೆ. ಚೆನ್ನಬಸವಯ್ಯನವರು ಒಬ್ಬ ಉಜ್ವಲ ದೇಶಾಬಿಮಾನಿಯೂ, ಮಹಾನ್ ಕಲಾವಿದರೂ ಆಗಿದ್ದಾರೆ. ಅವರ ಈ ತುಂಬು ಜೀವನದಲ್ಲಿ ಆರೋಗ್ಯಾಭಿವೃದ್ಧಿಗಳು ಲಭಿಸಿ ಅವರ ರಾಷ್ಟ್ರಕ್ಕೂ ಸುಜಾನಾತ್ಮಕ ಕಲೆಗೂ ಬಹಳ ಕಾಲ ಸೇವೆ ಸಲ್ಲಿಸುವಂತಾದ ಬೇಕೆಂಬುದು ನನ್ನ ಮಾತು. ನನ್ನ ಪತ್ನಿಯ ಹಾರ್ದಿಕ ಹಾರೈಕೆ ಎಂದು ತಮ್ಮ ಭಾಷಣದಲ್ಲಿ ನುಡಿದಿದ್ದಾರೆ.

**ರುಮಾಲೆಯವರ ವ್ಯಕ್ತಿತ್ವ**

ರುಮಾಲೆ ಚನ್ನಬಸವಯ್ಯನವರು ಸೌಮ್ಯತೆ, ವಿನಯ, ಸಮಾಧಾನದ ವ್ಯಕ್ತಿ. ಅವರು ಯಾರಿಗೂ ಮನಸ್ಸು ನೋಯಿಸಿದ ವ್ಯಕ್ತಿ ಅಲ್ಲ. ಅವರಲ್ಲಿ ಯಾರೆ ಬಂದರು ಅವರನ್ನು ಆತ್ಮಿಯವಾಗಿ ಸ್ವಾಗತಿಸುತ್ತಿದ್ದರು. ತಮ್ಮ ಬದುಕಿನಲ್ಲಿ ಪಾಲಿಸಿಕೊಂಡು ಬಂದದ್ದು ಶಿಸ್ತು ಅಚ್ಚುಕಟ್ಟುತನ ಹಾಗೂ ನಿರ್ಮಲತೆ ಶಿಸ್ತಿಲ್ಲದ ಸಂಸಾರ ಸುಂದರವಾಗುವುದಿಲ್ಲ. ಅಚ್ಚುಕಟ್ಟುತನವಿಲ್ಲದಿದ್ದರೆ ಜೀವನ ಅಸ್ತವ್ಯಸ್ತ ವಾಗುತ್ತದೆ. ಕಾರಣ ನನಗೆ ಶಿಸ್ತು ಸ್ವಚ್ಛತೆ ಓರಣಗಳು ನನ್ನ ಉಸಿರನಷ್ಟೇ ಅವಶ್ಯವಾಗಿದೆ ಎಂಬ ಮನಸ್ಸಿನವರು. ಅವರದು ಕಲೆ ಕಲಾವಿದ ಮತ್ತು ಪ್ರಕೃತಿಗಳನ್ನು ಆಧ್ಯಾತ್ಮಿಕ ಒಲವಿಗೆ ಸಹಜವಾದ ಪ್ರಶ್ನಾತೀತ ಮನೋಧರ್ಮದಿಂದ ಒಪ್ಪಿಕೊಳ್ಳುವಂತ ಅಪಾರ ನಮ್ರತೆ. ಇದರಿಂದ ಕಲೆಯೇ ಆಗಲಿ ದೇಶಭಕ್ತಿಯೆ ಆಗಲಿ ಅಥವಾ ತಮ್ಮ ಆಧ್ಯಾತ್ಮಿಕ ಗುರುಗಳ ವಿಷಯದಲ್ಲಿಯೇ ಆಗಲಿ ಪ್ರಶ್ನೆ, ವಿಮರ್ಶೆಗಳಿಗೆ ಅವಕಾಶವಿಲ್ಲದಂತಹ ನಿಷ್ಠೆಯು ರುಮಾಲೆಯವರ ಮಾತು ಮತ್ತು ಕೃತಿಗಳೆರೆಡರಲ್ಲೂ ಸ್ಪಷ್ಟ. ಅವರ ಅಭಿಪ್ರಾಯದಲ್ಲಿ ಯಾವುದು ಬೇಕು, ರಮ್ಯತೆಯಲ್ಲಿ ಭವ್ಯತೆಯೇ ವಾಸ್ತವತೆಯೇ ಅಥವಾ ಅಮೂರ್ತತೆಯೇ ಎಲ್ಲವೂ ಪ್ರಕೃತಿ ಗರ್ಭದಲ್ಲಿದೆ. (ಹ.ವೆಂ.ನಾಗರಾಜರಾವ್ ಅವರಿಂದ ಉದ್ಧೃತ, ರುಮಾಲೆಯವರ ಪ್ರಕೃತಿ ಚಿತ್ರಕಲೆ ಪ್ರಜಾಮತ ೩.೧೦.೧೯೭೪) ಪ್ರಕೃತಿಯಲ್ಲಿ ಕಾಣಬಹುದಾದ ಈ ಅಗಾಧತೆಯ ಅರಿವಿನಿಂದ ಅವರ ಮೇಲಾಗಿರುವ ಪರಿಣಾಮವೆಂದರೆ ನಮ್ರತೆ. "ಕಲ್ಲುಬಂಡೆಗಳೆ ಈಶ್ವರ, ನೀರು, ಸಸ್ಯಗಳೇ ವಿಷ್ಣು, ಆಸಸವೇ ಬ್ರಹ್ಮ" ಎಂದು ಭಾವಿಸಿ ಚಿತ್ರಿಸುವುದರಿಂದ ನನ್ನ ಕೃತಿ ಅಪೂರ್ವವಾಗುತ್ತದೆ. ನಾನು ನೆಪಮಾತ್ರ. (ಎಚ್.ವೆಂಕಟರಾಯ್ಯ ಅವರಿಂದ ಉದ್ಧೃತ, ಕನ್ನಡದ ನಿಷ್ಠಾವಂತ ಕಲಾವಿದ ಶ್ರೀ ರುಮಾಲೆ ಚನ್ನಬಸವಯ್ಯ, ಕರ್ಮವೀರ ೧೦.೩.೧೯೬೮) ಈ ಮಾತನ್ನು ಅಕ್ಷರಶಃ ತೆಗೆದುಕೊಳ್ಳಬೇಕಿಲ್ಲ. ನಿಜ. ಅಂದರೆ ಅವರ ಕೃತಿಗಳಲ್ಲಿ ಸಾಂಕೇತಿಕ ಎಂಬಂತಹ ತಪ್ಪು ಗ್ರಹಿಕೆಯು ಇದರಿಂದ ಉಂಟಾಗಬಾರದು. ಅದರೆ ಈ ಮಾತುಗಳು ಸೃಷ್ಟಿಸುವ ತೀವ್ರ ದೈವಭಕ್ತಿ ಮತ್ತು ಅತ್ಯಂತ ವಿನಯದಿಂದ ಕೂಡಿದ ವ್ಯಕ್ತಿತ್ವಗಳನ್ನು ಮರೆಯುವಂತಿಲ್ಲ."[೧೫]

---

೧೫. ಕರ್ನಾಟಕ ಕಲಾವಿದರ ಮಾಲೆ-೨೧, ರುಮಾಲೆ ಚನ್ನಬಸವಯ್ಯ, ಪು.೬

“ರುಮಾಲೆಯವರು ರಾಜಕೀಯ ಕ್ಷೇತ್ರದಲ್ಲಿ ಗಾಂಧೀ ಮತ್ತು ಹರ್ಡಿಕರ್ ಅವರಿಗೆ ಆಧ್ಯಾತ್ಮಿಕ ಕ್ಷೇತ್ರಗಳಲ್ಲಿ ತಪಸ್ವೀಜಿ ಮತ್ತು ಶಿವಬಾಲಯೋಗಿ ಅವರಿಗೆ ತಮ್ಮನ್ನು ವಿನಮ್ರತೆಯಿಂದ ಅರ್ಪಿಸಿಕೊಂಡವರು. ಕಲೆಯ ದೃಷ್ಟಿಯಿಂದ ಅವರ ಮನಸ್ಸೆಳೆದಿರುವ ಕಲಾವಿದರೆಂದರೆ ೧೮ನೆಯ ಶತಮಾನದ ಉತ್ತರಾರ್ಧದ ಇಂಗ್ಲೆಂಡಿನ್ ಡಾ. ಥಾಮಸ್ ಮನ್ರೋ (೧೭೫೯-೧೮೩೩) ಜೋಸೇಫ್ ಮ್ಯಾಲಡ್ ಟರ್ನರ್ (೧೭೭೫-೧೮೫೧) ಥಾಮಸ್ ಗರ್ಟಿನ್ (೧೭೭೫-೧೮೦೨) ಜಾನ್ ಸೆಲ್ ಕಾಟಮನ್ (೧೭೮೨-೧೮೪೨) ಪೀಟರ್ ಡಿ ವಿಂಟ್ (೧೭೮೪-೧೮೪೯) ಡೇವಿಡ್ ಕಾಕ್ಸ್ (೧೭೮೩-೧೮೫೯) ಮತ್ತು ಜಾನ್‌ವಾರ್ಲಿ (೧೭೭೮-೧೮೪೨) ರುಮಾಲೆಯವರಿಗೆ ಈ ರೀತಿ ಯಾವುದೇ ಕಲಾವಿದರ ಮೂಲಕೃತಿಗಳ ಪರಿಚಯವಿದ್ದುದಕ್ಕೆ ಆಧಾರವಿಲ್ಲ. ಭಾರತದಲ್ಲಿ ಅಂತರರಾಷ್ಟ್ರೀಯ ಕಲಾಪ್ರದರ್ಶನಗಳೇನಿದ್ದರು ಸಾಮಾನ್ಯವಾಗಿ ೨೦ನೆಯ ಶತಮಾನದ ಹೆಚ್ಚೆಂದರೆ ೧೯ನೇ ಶತಮಾನದ ಉತತರಾರ್ಧದ ಪಾಶ್ಚಾತ್ಯ ಕೃತಿಗಳಷ್ಟೇ ಹೆಚ್ಚಾಗಿ ಸೀಮಿತವಾದದ್ದು. ಆದ್ದರಿಂದ ಈ ಕಲಾವಿದರ ಕೃತಿಗಳಿಗೆ ರುಮಾಲೆಯವರು ರೂಪಿಸಿಕೊಂಡಂಥ ಪ್ರತಿಕ್ರಿಯೆಗಳು ಅಥವಾ ಆ ಮೂಲಕ ಕಂಡುಕೊಂಡಂಥ ಪ್ರಭಾವಗಳೇನಿದ್ದರು ಅವು ಈ ಕಲಾವಿದರ ಪ್ರಕೃತಿಗಳನ್ನು ಮತ್ತು ಅವರನ್ನು ಕುರಿತ ಬರಹಗಳನ್ನು ಅವಲಂಬಿಸಿರುವಂಥವು ಎನ್ನಬಹುದು. ಅಗತ್ಯವಾದ ಮೂಲಕೃತಿಗಳ ಕೊರತೆ ಇದೇ ಕಾರಣದಿಂದ ಇಲ್ಲಿ ಈ ಪ್ರಭಾವಗಳ ವಿಶ್ಲೇಷಣೆಯ ಪೊಳ್ಳಾಗುತ್ತದೆ. ಒಟ್ಟಿನಲ್ಲಿ ರುಮಾಲೆಯವರು ತಾವೇ ಹೆಸರಿಸಿರುವ (ಪ್ರಜಾಮತ ೩.೧೦.೧೯೭೪ ಹ.ವೆಂ. ನಾಗರಾಜರಾವ್ ಅವರ ಲೇಖನ ಮತ್ತು ಪ್ರಜಾವಾಣಿ ೨೦.೦೪.೧೯೬೭, ಎಸ್ಸಾರ್ಕೆ ಅವರ ಲೇಖನ) ಈ ಮೇಲಿನ ಯಾರೇ ಕಲಾವಿದರಾಗಲಿ ತಮ್ಮ ಯಾವ ಸಾಧನೆಗಳಿಂದ ರುಮಾಲೆಯವರ ಮನಸ್ಸೆಳೆದರು ಎಂಬುದನ್ನು ರುಮಾಲೆಯವರ ಕೃತಿಗಳಿಂದಲೇ ಸೀಮಿತ ಕಾರಣ ತಿಳಿದುಕೊಳ್ಳುವುದು ಕಷ್ಟ. ಆದರೆ, ಈ ಸಂದರ್ಭಕ್ಕೆ ಪೂರಕವಾಗಬಹುದಾದ ಅಂದರೆ ಇತರ ಕಲಾವಿದರ ಕೃತಿಗಳಿಗೆ ರುಮಾಲೆಯವರ ಪ್ರತಿಸ್ಪಂದನಾ ಸಾಮರ್ಥ್ಯವು ಯಾವ ರೀತಿಯದು ಎಂಬುದನ್ನು ಸ್ಪಷ್ಟಗೊಳಿಸುವಂತಹ ಉದಾಹರಣೆಯೊಂದಿಗೆ ತಾಯಿನಾಡು (೧೦.೦೮.೧೯೬೭) ದಿನಪತ್ರಿಕೆಯಲ್ಲಿ ಕಲಾವಿದ ಕೆ. ವೆಂಕಟಪ್ಪನವರನ್ನು (೧೮೮೦-೧೯೬೫) ಕುರಿತು “ಕಲಾಕ್ಷೇತ್ರದ ಏಕಲವ್ಯ ಶ್ರೀ ಕೆ. ವೆಂಕಟಪ್ಪ” ಎಂಬ ಲೇಖನವೊಂದನ್ನು ರುಮಾಲೆಯವರು ಬರೆದಿದ್ದಾರೆ. ದಿನಪತ್ರಿಕೆಯೊಂದರ ಸೀಮಿತ ಸ್ಥಳಾವಕಾಶದ ದೃಷ್ಟಿಯಿಂದ ಇದೊಂದು ಸಾಕಷ್ಟು ದೊಡ್ಡದಾದ ಲೇಖನವೇ ಈ ಬರಹದ ಉದ್ದೇಶ. “ಲೋಕ ತನ್ನನ್ನು ನೋಡುವ ಮೊದಲೇ ಲೋಕವನ್ನು ನೋಡಿ ಕುಳಿತ” ಈ ವೃದ್ಧ ಪೂರ್ಣ ಕಲಾವಿದರ ಬಗ್ಗೆ ಹೆಚ್ಚು ಹೆಚ್ಚು ತಿಳಿಯಲು ಜನ ಆಶಿಸಿದೆ. ಅಂತೆಯೇ ಈ ಲೇಖನ ಸ್ವತಃ ಕಲಾವಿದರಾದ ರುಮಾಲೆಯವರು. ಈ ಲೇಖನದಲ್ಲಿ ಸಾಮಾನ್ಯವಾದ ಹೇಳಿಕೆಗಳನ್ನು ಬಿಟ್ಟರೆ, ಒಂದಾದರೂ ವಿಮರ್ಶಾತ್ಮಕವಾದ ಮಾತುಗಳನ್ನಾಡುವುದಿಲ್ಲ. ಕಲೆ-ಕಲಾವಿದ ಮತ್ತು ಮನುಷ್ಯರನ್ನು ಸಹ ಪ್ರಶ್ನಾತೀತರಾಗಿ ನೋಡುವ ಅಪಾರ ವಿನಯ ಮತ್ತು ಹೃದಯ ವೈಶಾಲ್ಯದ ವ್ಯಕ್ತಿತ್ವವೇ ಇಲ್ಲಿಯೂ ಎದ್ದು ಕಾಣುತ್ತದೆ.

ರುಮಾಲೆಯವರ ಕಲೆಯ ಸೋಲು ಗೆಲುವುಗಳೆರಡರಲ್ಲೂ ಅವರ ವ್ಯಕ್ತಿತ್ವವು ವಹಿಸಿರುವ ಪಾತ್ರ ಮಹತ್ತರವಾದದ್ದು."[೧೬]

ಹೀಗೆ ರುಮಾಲೆಯವರು ಬದುಕು ಅವರು ಬೆಳೆದು ಬಂದ ಹೆಜ್ಜೆಗುರುತುಗಳನ್ನು ಇಲ್ಲಿ ಸ್ಥೂಲವಾಗಿ ಸಮೀಕ್ಷಿಸಲಾಗಿದೆ.

---

೧೬. ಕರ್ನಾಟಕ ಕಲಾವಿದರ ಮಾಲೆ-೨೧, ರುಮಾಲೆ ಚನ್ನಬಸವಯ್ಯ, ಪು.೭-೮



ರಶ್ಯನ್ ಕಲಾವಿದ ರೊರಿಚ್‌ರವರು ರೂಮಾಲೆ ಕಲಾ ಗ್ಯಾಲರಿಯಲ್ಲಿ



ಜಪಾನಿ ದಂಪತಿಗಳೊಂದಿಗೆ ರೂಮಾಲೆಯವರು



[illegible]ರೊಂದಿಗೆ ರೂಮಾಲೆ ಹಾಗೂ ಕಬೆ ಕುಟುಂಬ

## ಅಧ್ಯಾಯ ೩

# ರುಮಾಲೆ ಚನ್ನಬಸವಯ್ಯನವರ ವೃತ್ತಿ ಮತ್ತು ಪ್ರವೃತ್ತಿ

"ರುಮಾಲೆ ಚನ್ನಬಸವಯ್ಯನವರು ಕಲಾ ಇತಿಹಾಸದಲ್ಲಿ ಗುರುತಿಸಬಹುದಾದ ಸೃಜನಾತ್ಮಕ ನವ್ಯ ಕಲಾವಿದರು. ಕಲೆ ಮತ್ತು ಕಲಾವಿದನ ನಡುವಿನ ಅಂತರವನ್ನು ಭಾವನಾತ್ಮಕ ಬಣ್ಣಗಳ ಒಳ ನೆಲೆಯ ಮೂಲಕ ಅಭಿವ್ಯಕ್ತಿಸಲು ಹೊರಟ ಸೃಜನಾತ್ಮಕ ವ್ಯಕ್ತಿ ಎಂದರೆ ತಪ್ಪಾಗಲಾರದು. ಅವರು ಹೆಚ್ಚು ಪ್ರಕೃತಿ ಮತ್ತು ವ್ಯಕ್ತಿ ಚಿತ್ರಗಳನ್ನು ಒಳಗೊಂಡಿದೆ. ಅಲ್ಲದೆ ಆಧ್ಯಾತ್ಮಿಕ ಕಲೆಯನ್ನು ಆವರಿಸು ವಂತಹ ಕೃತಿಗಳನ್ನು ಸಹ ರಚನೆ ಮಾಡಿದ್ದಾರೆ. ಇವರ ಕಲಾಕೃತಿಗಳು ನೋಡುಗನಿಗೆ ಒಂದು ರೀತಿಯ ದಿಗ್ಭ್ರಮೆ ಉಂಟುಮಾಡುವಂತಿವೆ. ಇವರ ಕಲಾಕೃತಿಗಳನ್ನು ನೋಡುತ್ತ ಹೋದಾಗ ಮೊದಮೊದಲಿಗೆ ಬಣ್ಣಗಳು ಆಟ ಆಡುವಂತೆ ಕಾಣುವ ಕಾಗದದ ಮೈವಳಿಕೆ. ದೂರ ಹೋದಂತೆ ಮೈವಳಿಕೆಯ ಆಕಾರವು ಸ್ಪಷ್ಟಗೊಳ್ಳುತ್ತವೆ".[೧]

"ರುಮಾಲೆ ಚೆನ್ನಬಸವಯ್ಯನವರು ಹಲವಾರು ಕ್ಷೇತ್ರಗಳಲ್ಲಿ ತೊಡಗಿಸಿಕೊಂಡವರು. ಅದರಲ್ಲಿ ಸ್ವತಂತ್ರ ಚಳುವಳಿ ಮತ್ತು ಚಿತ್ರಕಲೆಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ಕೊಟ್ಟಂತಹ ಅಪರೂಪದ ವ್ಯಕ್ತಿ ಯಾಗಿದ್ದಾರೆ. ಸಾಮಾನ್ಯವಾಗಿ ಒಬ್ಬ ವ್ಯಕ್ತಿ ಒಂದು ವಿಷಯದಲ್ಲಿ ಅಧ್ಯಯನ ಮಾಡಿ ಅದರಲ್ಲಿ ತೊಡಗಿಸಿಕೊಂಡು ಅದರಲ್ಲಿ ಪಾಂಡಿತ್ಯವನ್ನು ಪಡೆಯುವ ಸಾಮರ್ಥ್ಯವಿದ್ದರೆ, ರುಮಾಲೆ ಚನ್ನಬಸವಯ್ಯ ನವರು ಸೇವಾದಳ, ರಾಜಕೀಯ ಸ್ವತಂತ್ರ ಚಳುವಳಿ, ತಾಯ್ನಾಡು ಪತ್ರಿಕೆಯ ಸಂಪಾದಕರಾಗಿ ಹಾಗೂ

---

೧. ಬಾಗೂರು ಮಾರ್ಕಂಡೆಯ್ಯ, ಕಲಾವಿದರು, ಸಂದರ್ಶನ ಅಗಸ್ಟ್, ೨೦೦೯

ಒಬ್ಬ ಸಮಾಜಮುಖಿ ವ್ಯಕ್ತಿಯಾಗಿ ಚಿಂತಿಸಿರುವ ಒಬ್ಬ ಧಿಮಂತ ವ್ಯಕ್ತಿಯಾಗಿ ಬೆಳೆದಿದ್ದಾರೆ. ಇಷ್ಟೇ ಅಲ್ಲದೆ ಆಧ್ಯಾತ್ಮಿಕ ಮನಸ್ಸಿನ ಉನ್ನತಿಗಳ ಕುರಿತು ಅರಿತವರು. ಇದನ್ನೆಲ್ಲಾ ನಾವು ನೋಡಿದಾಗ ರುಮಾಲೆಯವರು ಕಲಾವಿದರಲ್ಲಿ ಭಿನ್ನವಾಗಿ ನಿಲ್ಲುತ್ತಾರೆ. ಅಲ್ಲದೇ ಪ್ರತಿಯೊಬ್ಬ ಸಾಮಾನ್ಯರಿಗೂ ವಿಶಿಷ್ಟ ರೀತಿಯ ವ್ಯಕ್ತಿಯಾಗಿ ಕಂಡುಬರುತ್ತಾರೆ. ಅವರ ಚಿತ್ರಗಳನ್ನು ನೋಡುತ್ತಾ ಹೋದರೆ ಯಾವುದೋ ಒಂದು ಚಿತ್ರಮಯವಾದ ಲೋಕಕ್ಕೆ ಕರೆದುಕೊಂಡು ಹೋಗುತ್ತದೆ. ಕಲೆಯಲ್ಲಿ ತಮ್ಮನ್ನು ತಾವು ಸಮರ್ಪಿಸಿಕೊಂಡು ಕಲೆಯನ್ನು ವಿಶಿಷ್ಟವಾಗಿ ಅಭಿವ್ಯಕ್ತಿಸಲು ಹೊರಟ ಕೆಲವೇ ಕೆಲವು ಜನರಲ್ಲಿ ರುಮಾಲೆ ಚನ್ನಸವಯ್ಯನವರು ಒಬ್ಬರಾಗಿ ಕಂಡುಬರುತ್ತಾರೆ."[೧]

**ರುಮಾಲೆಯವರು ವೃತ್ತಿಜೀವನ**

ರುಮಾಲೆ ಚನ್ನಬಸಯವಯ್ಯನವರ ವೃತ್ತಿ ಜೀವನ ಚಿತ್ರಕಲೆ ಎಂದೇ ಹೇಳಬಹುದು. ಕಾರಣ ಅವರು ಹಲವಾರು ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ನಿಸ್ವಾರ್ಥವಾಗಿ ಸೇವೆ ಸಲ್ಲಿಸಿದ್ದಾರೆ. ಅವುಗಳಲ್ಲಿ ಸೇವಾದಳ, ಸ್ವಾತಂತ್ರ್ಯ ಚಳುವಳಿ, ರಾಜಕೀಯ, ಸಮಾಜ ಮುಖಿಯಾಗಿ ಹೀಗೆ ಹತ್ತು ಹಲವು ಕ್ಷೇತ್ರಗಳಲ್ಲಿ ದುಡಿದಿದ್ದು ನಮಗೆ ತಿಳಿದುಬರುತ್ತದೆ. ಇದರ ಜೊತೆಯಲ್ಲಿಯೇ ಚಿತ್ರಕಲೆಯನ್ನು ಚಿಕ್ಕವಯಸ್ಸಿನಿಂದಲೂ ಮೈಗೂಡಿಸಿಕೊಂಡು ಬಂದತಹ ಕಲಾವಿದ, ಕಲಾಪ್ರವೀಣ, ಕಲಾಕುಸುಮ, ಎಂದರೆ ತಪ್ಪಾಗಲಾರದು. ರುಮಾಲೆ ಚನ್ನಬಸಯ್ಯನವರು ಪ್ರಕೃತಿ ಪ್ರಿಯರು. ಅವರು ಪ್ರತಿಯೊಂದು ಸೌಂದರ್ಯವನ್ನು ಕಣ್ತುಂಬ ನೋಡಿ ಆನಂದಿಸುವ ವ್ಯಕ್ತಿಯಾಗಿದ್ದಾರೆ. ಇವರು ಪ್ರಕೃತಿಯ ವಿಭಿನ್ನ ಸೌಂದರ್ಯವನ್ನು ತನ್ನ ಕಲೆಯಲ್ಲಿ ತೊಡಗಿಸಲು ಎಷ್ಟೋಬಾರಿ ದೇಶ, ವಿದೇಶಗಳಿಗೆ ಹೋಗಿ ಅಲ್ಲಿನ ಪ್ರಕೃತಿಯ ಸೌಂದರ್ಯದ ರಮ್ಯತಾಣಗಳನ್ನು ಚಿತ್ರಿಸಿಕೊಂಡು ಬಂದಿರುವ ಉದಾಹರಣೆಗಳು ಉಂಟು. ಇವರು ನಿಸರ್ಗಮಾತೆಯ ಸೌಂದರ್ಯದ ದೃಶ್ಯಗಳನ್ನು ಕಣ್ತುಂಬ ನೋಡಿ ಆನಂದಿಸುತ್ತಿದ್ದರು. ಆ ಸುಂದರವಾದ ನಿಸರ್ಗಮಾತೆಯ ರಮ್ಯ ನೋಟಗಳನ್ನು ಹೃದಯ ಪೂರ್ವಕವಾಗಿ ಕಣ್ಣಿನಿಂದ ನೋಡಬೇಕು ಎಂದು ಹೇಳುತ್ತಿದ್ದರು. ಅವರು ಅದೆಷ್ಟೋ ಬಾರಿ ಪ್ರಕೃತಿಯ ಭವ್ಯತೆಯ ರಮಣೀಯತೆಯನ್ನು ಕಂಡು ಆನಂದಪಡುವರಾಗಿದ್ದಾರೆ.

"ರುಮಾಲೆಯವರು ಪ್ರಕೃತಿಯ ಕುರಿತು ಚಿತ್ರಗಳನ್ನು ರಚಿಸುವ ಮುನ್ನ ಅದರಲ್ಲಿ ಬರುವಂತಹ ರೇಖೆ, ಬಣ್ಣ, ಭಾವ, ಹೀಗೆ ಪ್ರತಿಯೊಂದನ್ನು ಕೃತಿ ನಿರ್ಮಾಣದ ಮೊದಲೇ ತಮ್ಮ ಮನಸ್ಸಿನಲ್ಲಿ ಸಂಯೋಜನೆಯ ಚಿತ್ರಣವನ್ನು ಕಟ್ಟಿಕೊಳ್ಳುತ್ತಿದ್ದರು. ಕಲಾಕೃತಿಯನ್ನು ಕಾಗದದ ಮೇಲೆ ಅಭಿವ್ಯಕ್ತಿ ಪಡಿಸಿಲು ಹೆಚ್ಚಿನ ಸಮಯ ತೆಗೆದುಕೊಳ್ಳುತ್ತಿರಲಿಲ್ಲ. ಹಾಗಾಗಿ ಒಂದು ಸುಂದರವಾದ ಪ್ರಕೃತಿಯ ದೃಶ್ಯಗಳನ್ನು ರಮ್ಯವಾಗಿ ರಮಣೀಯವಾಗಿ ಚಿತ್ರಿಸುತ್ತಿದ್ದರು. ಅವರ ಚಿತ್ರರಚನೆ ಜಲವರ್ಣಗಳಲ್ಲಿಯೇ

---

೧. ಬಾಗೂರು ಮಾರ್ಕಂಡೆಯ್ಯ, ಕಲಾವಿದರು, ಸಂದರ್ಶನ ಅಗಸ್ಟ್, ೨೦೦೯

ಆದರೂ, ತೈಲವರ್ಣದಲ್ಲಿಯೂ ಕೂಡ ಪ್ರಭಾವಿ ಕೃತಿಗಳನ್ನು ರಚಿಸಿದ್ದಾರೆ. ಅವರು ನಿಸರ್ಗದ ಮಡಿಲಲ್ಲಿ ತನ್ಮಯರಾಗುಳಿದು ಅವರ ಅನಂತ ಮುಖಗಳನ್ನು ತಮ್ಮ ಕಲಾ ದರ್ಶನದಲ್ಲಿ ತೋರಿಸಿ ಕೊಟ್ಟಿದ್ದಾರೆ."[೩]

"ಆಧುನಿಕ ಭಾರತೀಯ ಕಲೆಯಲ್ಲಿ ಅವರ ಕಲಾಕೃತಿಗಳು ಅಮರವಾಗಿರುವುದು ಇದಕ್ಕೆ ನಿದರ್ಶನೀಯ. ಅವರ ಚಿತ್ರಗಳಲ್ಲಿ ವ್ಯಕ್ತವಾಗುವ ಪ್ರಕೃತಿಯ ಸತ್ವ ಮತ್ತು ಕಾಂತಿ ಯಾರನ್ನೇ ಆದರೂ ಮೆರಗುಗೊಳಿಸುತ್ತವೆ. ಅವರ ಕಲಾಕೃತಿಯಲ್ಲಿ ನಿಸರ್ಗವು ತನ್ನ ಹೃದಯವನ್ನು ತೆರೆದು ತೋರುವುದು ಸೌಂದರ್ಯೋಪಾಸಕರಾದ ಕಲಾತಪಸ್ವಿಗಳಿಗೆ ಮಾತ್ರ ಅದೂ ಸುದಿರ್ಘತಪಶ್ಚರ್ಯೆಯ ತರುವಾಯ ರುಮಾಲೆ ಚನ್ನಬಸವಯ್ಯನವರು ಇಂಥ ಕಲಾತಪಸ್ವಿಗಳಲ್ಲಿ ಒಬ್ಬರು ಅವರು ತಪಸ್ಸು ಸುದೀರ್ಘವಾದದ್ದು, ಏಕನಿಷ್ಟವಾದದ್ದು ಅನನ್ಯ ಶರಣತೆಯಿಂದ ಉಜ್ವಲವಾದದ್ದು. ಸಹಸ್ರ ಮುಖಿಯಾದ ನಿಸರ್ಗ ದೇವಿಯ ಒಂದೊಂದು ಮುಖವನ್ನು ಪರಿಚಯಿಸಿಕೊಂಡು ಅದರ ರೂಪಲಾವಣ್ಯಗಳನ್ನು ತಕ್ಕ ವರ್ಣವಿನ್ಯಾಸದಲ್ಲಿ ಸೆರೆಹಿಡಿಯಲು ಅವರ್ಣ ವಿನ್ಯಾಸದಲ್ಲಿ ಬಾಹ್ಯರೂಪರಾಗಗಳಷ್ಟೇ ಚಿತ್ರಿತವಾಗದೇ ಅವುಗಳ ಹಿಂದೆ ಮಿಡಿದ ಹೃದಯದ ರಹಸ್ಯಮಯ ಸ್ಪಂದನಗಳನ್ನು ವಿಸ್ತಾರವಾಗಿ ಮೂಡಿಸಲು ಅವರು ಜೀವನದ ಉದ್ದಕ್ಕೂ ಸಾಧಿಸುತ್ತಾ ಬಂದಿದ್ದಾರೆ. ಇವರು ಈ ದಿಸೆಯಲ್ಲಿ ದೊಡ್ಡ ಸಿದ್ದಿಯನ್ನು ಪಡೆದು ಧನ್ಯರಾಗಿದ್ದಾರೆ. ಇವರಿಗೆ ಕನ್ನಡ ನಾಡು ಜನ್ಮವಿತ್ತು ಕಲಾ ಪ್ರಪಂಚಕ್ಕೆ ತನ್ನ ಕೊಡುಗೆಯನ್ನು ಪರಿಪೂರ್ಣವಾಗುವಂತಾಗಿದೆ. ಕನ್ನಡಿಗರು ಇದನ್ನು ನೆನದು ಹೆಮ್ಮೆಪಡಬೇಕು. ಇವರ ಹಿರಿಮೆಯ ಹೆಜ್ಜೆಗಳಲ್ಲಿ, ತಮ್ಮ ಕೀರ್ತಿಯ ಕುಡಿಗಳು ಬೆಳೆಯುತ್ತಿರುವುದನ್ನು ಕುಂಡು ಈ ಶ್ರೇಷ್ಟಕಲಾವಿದನಿಗೆ ತಕ್ಕ ಮನ್ನಣೆ ನೀಡಬೇಕು. ದೇಶ ವಿದೇಶಗಳ ವಿಖ್ಯಾತ ಕಲಾವಿದರುಗಳು ಮೆಚ್ಚಿಕೊಂಡಿರುವ ಇವರ ಕಲೆಯನ್ನು ಕನ್ನಡಿಗರು ಮೆಚ್ಚದಿದ್ದರೆ ಹೇಗೆ? ಬಹುಕಾಲ ಕಲಾಲೋಕದಲ್ಲಿ ಬಾಳಿ ಬೆಳಗಬಲ್ಲ ಇವರ ಕಲಾಕೃತಿಗಳು ಕನ್ನಡಿಗರ ಸ್ವತ್ತು ಮಾತ್ರ ಅಲ್ಲ ಮಾನವ ಜನಾಂಗದ ಸಂಪತ್ತು ಎಂದು ಸಿದ್ದಯ್ಯ ಪುರಾಣಿಕ ಅವರು ೪.೯.೧೯೭೭ರ ಪತ್ರಿಕೆಯೊಂದರಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ."[೪]

"ಆ ಸಮಯದಲ್ಲಿ ತುಂಬ ಪ್ರಸಿದ್ಧಿ ಪಡೆದ ಕಲಾವಿದರೆಂದರೆ ರುಮಾಲೆ ಚನ್ನಬಸವಯ್ಯನವರು. ಇವರು ಪ್ರಕೃತಿ ಕುರಿತ ಚಿತ್ರ ರಚನೆಯಲ್ಲಿ ತುಂಬಾ ಸೂಕ್ಷ್ಮವಾದ ಚಿಕ್ಕ ಚಿಕ್ಕ ವಸ್ತುಗಳನ್ನು ಕೂಡ ತುಂಬಾ ಸ್ಪಷ್ಟತೆಯಿಂದ ಕಾಣುವಂತೆ ಚಿತ್ರರಚನೆ ಮಾಡುತ್ತಿದ್ದರು. ಇವರು ಪ್ರತಿ ವಸಂತ ಮಾಸವನ್ನು ಕಾತುರದಿಂದ ಕಾಯುತಿದ್ದರು. ಆ ವಸಂತ ಮಾಸ ಬಂದರೆ ಇವರಿಗೆ ಹಬ್ಬವಿದ್ದಂತೆ ಆ ಸಮಯದಲ್ಲಂತೂ ಮುಂಜಾನೆ ಮುಸುಕಿನಲ್ಲಿಯೇ ಎದ್ದು ಪ್ರತಿನಿತ್ಯ ಅವರಿಗೆ ಇಷ್ಟವಾದ ಸ್ಥಳಕ್ಕೆ ಹೋಗಿ ಚಿತ್ರ ರಚನೆಯನ್ನು

---

೩. ಡಾ. ಪುಷ್ಪದ್ರಾವೀಡ್ ಚಿತ್ರಕಲಾವಿದೆ, ಸಂದರ್ಶನ ಅಗಸ್ಟ್, ೨೦೦೯

೪. ಡಾ. ಪುಷ್ಪದ್ರಾವೀಡ್ ಚಿತ್ರಕಲಾವಿದೆ, ಸಂದರ್ಶನ ಅಗಸ್ಟ್, ೨೦೦೯

ಮಾಡಿಕೊಂಡು ಬರುತ್ತಿದ್ದರು. ವಸಂತ ಮಾಸದಲ್ಲಿ ಬಿಡುವ ಪುಷ್ಪಗಳಿಗೆ ಇವರು ಕಾತುರದಿಂದ ಕಾದು ಅವರಿಗೆ ಇಷ್ಟವಾದ ಮರದ ಹೂವುಗಳನ್ನು ಚಿತ್ರಿಸುತ್ತಿದ್ದರು. ಇಂತಹ ಚಿತ್ರರಚನೆಗೆ ನಿರ್ಧಿಷ್ಟವಾದ ಸಮಯವನ್ನು ತೆಗೆದುಕೊಳುತ್ತಿದ್ದರು. ಅಂದರೆ ಮುಂಜಾನೆ ಸೂರ್ಯ ಉದಯವಾಗುವ ಮುನ್ನ ಪ್ರತ್ಯೇಕವಾದ ಸ್ಥಳವನ್ನು ಆಯ್ಕೆ ಮಾಡಿಕೊಂಡು ಪ್ರಕೃತಿ ಚಿತ್ರಣವನ್ನು ಚಿತ್ರಿಸಲು ಪ್ರಾರಂಭಿಸುತ್ತಿದ್ದರು. ರುಮಾಲೆ ಅವರು ಕೆಲವೊಂದು ಚಿತ್ರಗಳನ್ನು ದಿನದಲ್ಲಿ ಎರಡುರಿಂದ ಮೂರು ಚಿತ್ರರಚನೆ ಮಾಡಿದರೆ ಇನ್ನು ಕೆಲವೊಮ್ಮೆ ಒಂದು ವಾರಕ್ಕೆ ಒಂದೇ ಚಿತ್ರವನ್ನು ರಚಿಸುತ್ತಿದ್ದರು. ಕಾರಣ ಜಲವರ್ಣ ಮಾಧ್ಯಮದಲ್ಲಿ ಚಿತ್ರಣ ರಚನೆ ಮಾಡುವಾಗ ಒಂದು ದಿನದಲ್ಲಿ ಒಂದರಿಂದ ಎರಡು ಅಥವಾ ಮೂರು ಚಿತ್ರಣಗಳನ್ನು ಚಿತ್ರಿಸುತ್ತಿದ್ದರು. ಆದರೆ ತೈಲವರ್ಣ ಮಾಧ್ಯಮದಲ್ಲಿ ಚಿತ್ರರಚನೆ ಮಾಡಿದರೆ ಅದು ಬೇಗನೆ ಆರದೆ ಇರುವುದರಿಂದ ಎಂಟರಿಂದ ಹತ್ತುದಿನಗಳ ಕಾಲ ಒಂದು ಚಿತ್ರ ರಚನೆಗೆ ಸಮಯ ತೆಗೆದುಕೊಳ್ಳುತ್ತಿದ್ದರು. ಇಂತಹ ಸಮಯದಲ್ಲಿ ಒಂದು ಕಲಾಕೃತಿಯು ಮುಗಿಯುವತನಕ ಪ್ರತಿದಿನವೂ ಪ್ರತ್ಯೇಕವಾಗಿ ಅದೇ ಸಮಯವನ್ನು ಆಯ್ಕೆಮಾಡಿಕೊಂಡು ತುಂಬಾ ತಾಳ್ಮೆಯಿಂದ ಚಿತ್ರರಚನೆಗೆ ತೋಡಗುತ್ತಿದ್ದರು.”[೫]

“ಅವರು ಕಲಾಕೃತಿ ರಚನೆ ಮಾಡುವ ಪ್ರಾರಂಭದ ದಿನ ಹೇಗೆ ಪ್ರಕೃತಿಯ ವಾತವರಣವಿರುತ್ತದೆಯೊ ಅದೇ ವಾತವರಣ ಇರುವ ದಿನ ಮತ್ತು ಅದೇ ಸಮಯದಲ್ಲಿ ಅವರು ಅಂದು ಕೂತಿರುವ ಸ್ಥಳದಲ್ಲೆ ಕುಳಿತು ಚಿತ್ರ ರಚನೆಗೆ ತೊಡಗುತ್ತಿದ್ದರು. ಒಂದು ವೇಳೆ ಮಾರನೆ ದಿನ ಸೂರ್ಯನ ಕಿರಣಗಳು ಮೂಡದೆ ಇದ್ದು ಮೋಡಕವಿದ ವಾತವರಣ ಕಂಡು ಬಂದರೆ ಪ್ರಾರಂಭ ಮಾಡಿದ ಆ ಚಿತ್ರಣವನ್ನು ಅಲ್ಲಿಗೆ ನಿಲ್ಲಿಸಿ ಮತ್ತೆ ಸೂರ್ಯನ ಬೆಳಕು ಪ್ರಾರಂಭದ ದಿನದಂತೆ ಸ್ಪಷ್ಟವಾಗಿ ಬೀಳುವವರೆಗೂ ಕಾಯುತ್ತಿದ್ದರು. ಸ್ಪಷ್ಟವಾದ ಬೆಳಕು ಬಂದ ನಂತರ ನಿಂತ ಚಿತ್ರಣವನ್ನು ಮುಂದುವರಿಸುತ್ತಿದ್ದರು. ಹೀಗೆ ಇವರು ತುಂಬಾ ಕಾಳಜಿಯಿಂದ ಚಿತ್ರರಚನೆಯಲ್ಲಿ ಮಗ್ನರಾಗುತ್ತಿದ್ದರು. ಇಂತಹ ವಿಶಿಷ್ಟವಾದ ಕಲಾವಿದರು ಕರ್ನಾಟಕದಲ್ಲಿ ಸಿಗುವುದು ವಿರಳ ಎಂದು ಹೇಳಬಹುದು. ಇವರು ಕೃತಿ ರಚನೆ ಮಾಡಲು ಹೊರಡುವ ಮುನ್ನ ಮೊದಲು ಅವರು ನಿತ್ಯಕರ್ಮಗಳನ್ನು ಮುಗಿಸಿ ಸ್ನಾನಮಾಡಿ ದೇವರ ಪೂಜೆ ಮಾಡಿ ಬಿಳಿ ವಸ್ತ್ರವನ್ನು ಧರಿಸಿಕೊಂಡು ಚಿತ್ರರಚನೆಗೆ ಬೇಕಾಗುವ ಸಿದ್ಧತೆಗಳನ್ನು ತಯಾರಿ ಮಾಡಿಕೊಂಡು ಹೊರಡುತ್ತಿದ್ದರು. ಅವರ ಕೈ ಚೀಲದಲ್ಲಿ ಜಲವರ್ಣ ಮತ್ತು ತೈಲವರ್ಣ ಎರಡು ತರಹದ ಬಣ್ಣಗಳನ್ನು ತೆಗೆದುಕೊಡು ನಂತರ ಅದಕ್ಕೆ ಬೇಕಾದ ತೈಲವರ್ಣದ ಕಾಗದ ಮತ್ತು ಜಲವರ್ಣದ ಕಾಗದ ಎರಡನ್ನು ಹಾಗೂ ಆ ಎರಡಕ್ಕೂ ಬೇಕಾದ ಕುಂಚಗಳನ್ನು ಒಟ್ಟಿಗೆ ಜೋಡಿಸಿಕೊಂಡು ಹೊರಡುತ್ತಿದ್ದರು. ಅಲ್ಲಿಗೆ

೫. ಡಾ. ಪುಷ್ಪದ್ರಾವೀಡ್ ಚಿತ್ರಕಲಾವಿದೆ, ಸಂದರ್ಶನ ಅಗಸ್ಟ್, ೨೦೦೯

ಹೋದ ನಂತರ ಅಂದಿನ ದಿನದ ಪ್ರಕೃತಿಯ ವಾತವರಣವನ್ನು ಗಮನಿಸಿ ಅವರಿಗೆ ಇಷ್ಟವಾದ ಕಾಗದವನ್ನು ಆಯ್ಕೆ ಮಾಡಿಕೊಂಡು ಚಿತ್ರರಚನೆಗೆ ತೊಡಗುತ್ತಿದ್ದರು."[೬]

ಅವರು ರಚಿಸಿದ ಕಲಾಕೃತಿಗಳನ್ನು ನೋಡಲು ತುಂಬಾ ಆನಂದವಾಗುತ್ತಿತ್ತು. ಅವರು ಚಿತ್ರಿಸಿದ ಚಿತ್ರಣವು ತುಂಬಾ ನಿಶ್ಚಳವಾಗಿ ಸುಂದರವಾಗಿ ಕಾಣುತ್ತಿತ್ತು. ಜಲವರ್ಣವೂ ತುಂಬಾ ಕಠಿಣವಾದ ಮಾಧ್ಯಮವಾದರೂ ಬೀಳುವ ಸೂರ್ಯನ ಕಿರಣಗಳನ್ನು ಮತ್ತು ನೆರಳು ಬೆಳಕುಗಳನ್ನು ತುಂಬಾ ಜಾಗರುಕತೆಯಿಂದ ಬೆಳಕಿನ ಜಾಗವನ್ನು ಮೊದಲೆ ಬಿಟ್ಟುಕೊಂಡು ಉಳಿದ ಸ್ಥಳಕ್ಕೆ ಇತರೆ ಬಣ್ಣಗಳನ್ನು ಲೇಪಿಸುತ್ತಿದ್ದರು. ಬೆಳಕು ಬೀಳುವ ಜಾಗದಲ್ಲಿ ಬಿಳಿ ಕಾಗದದನ್ನೆ ಬಿಟ್ಟು ಆಕೃತಿಯ ಸ್ಪಷ್ಟತೆಯನ್ನು ತೋರಿಸುತ್ತಿದ್ದರು. ಅವರು ಹಾಕುವಂತಹ ಕುಂಚದ ಸೆಳತವನ್ನು ನೋಡಿದರೆ ಆ ಒಂದು ಕಲಾಕೃತಿಯಲ್ಲಿ ಪ್ರಕೃತಿಗೆ ಅನುಗುಣವಾಗಿ ತಂಗಾಳಿ ಬೀಸುತ್ತದೆಯೇನೋ ಎಂಬಂತೆ ನೋಡುಗರಿಗೆ ಬಾಸವಾಗುತ್ತಿತ್ತು. ಇವರ ಕಲಾಕೃತಿಯಲ್ಲಿ ಮುಖ್ಯವಾಗಿ ಕಂಡುಬರುವುದು ಕನ್‌ಪರಿ ರೀತಿ, ಹಾಗೂ ಇವರ ಚಿತ್ರ ರಚನೆಯಲ್ಲಿ ಸ್ಪಷ್ಟವಾದ ಯಥದರ್ಶನವನ್ನು ಕಾಣಬಹುದು. ನೈಜತೆಯಲ್ಲೇ ಒಂದು ರೀತಿಯ ಇಂಪ್ರಸ್‌ಇಜಂ ರೀತಿಯಲ್ಲಿ ಕಂಡುಬರುತ್ತವೆ. ಒಟ್ಟಿನಲ್ಲಿ ಹೇಳುವುದಾದರೆ ಇವರ ಕಲಾಕೃತಿಗಳು ತುಂಬಾ ವಿಶಿಷ್ಟತೆಯಿಂದ ಕಂಡುಬರುತ್ತವೆ. ಇತರ ಕಲಾವಿದರುಗಳಿಗೆ ಹೋಲಿಸಿದರೆ ರುಮಾಲೆಯವರ ಕಲಾಕೃತಿಗಳು ಬಹಳ ಭಿನ್ನವಾಗಿ ಗೋಚರಿಸುತ್ತವೆ. ಅಂದಿನ ಸಮಕಾಲೀನ ಕಲಾವಿದರುಗಳು ಹೆಚ್ಚು ವಸ್ತುವಿಷಯವನ್ನು ಆಯ್ದುಕೊಂಡು ಅಂದರೆ ರಾಮಯಣ, ಮಹಾಭಾರತದ ದೃಶ್ಯಾವಳಿಗಳ ಸಂಯೋಜನಾ ಚಿತ್ರಗಳನ್ನು ರಚನೆಮಾಡಿರುವುದು ಕಂಡುಬರುತ್ತದೆ. ಉದಾಹರಣೆಗೆ ಎಸ್.ಎಸ್. ಕುಕ್ಕೆ, ಕೆ.ಕೆ. ಹೆಬ್ಬಾರ, ಎಸ್.ಎಂ. ಪಂಡಿತ್, ಎಂ.ವಿ.ವಿ. ಆಚಾರ್ಯ, ಇನಾಮತಿ, ನಂಜುಂಡರಾವ್, ಇತ್ಯಾದಿ ಕಲಾವಿದರುಗಳ ಕಲಾಕೃತಿಗಳನ್ನು ನಾವು ಗಮನಿಸಿದಾಗ ಈ ಮೇಲಿನ ಅಂಶಗಳು ಕಂಡುಬರುತ್ತವೆ ಎಂದು ಡಾ. ಪುಷ್ಪದ್ರಾವಿಡರವರು ಹೇಳುತ್ತಾರೆ.

**ಎಸ್.ಎಸ್. ಕುಕ್ಕೆ :** ಇವರು ೧೯೧೮ರಲ್ಲಿ ಜನಿಸಿ ಮೈಸೂರಿನ ಚಾಮರಾಜೇಂದ್ರ ಕಲಾಶಾಲೆಯಲ್ಲಿ ಡಿಪ್ಲೋಮಾ ಪದವಿಯನ್ನು ಪಡೆದರು. ಇವರು ಹೆಚ್ಚು ವ್ಯಕ್ತಿಚಿತ್ರಗಳು ಮತ್ತು ಪೌರಾಣಿಕ ಕಥೆಗಳಿಗೆ ಸಂಬಂಧಪಟ್ಟಂತಹ ಕಲಾಕೃತಿಗಳನ್ನು ಹಾಗೂ ಕೆಲವು ಪ್ರಕೃತಿ ಚಿತ್ರಗಳನ್ನು ರಚನೆಮಾಡಿದ್ದಾರೆ. ವ್ಯಕ್ತಿ ಚಿತ್ರಗಳಲ್ಲಿ ನೆಹರು, ಗಾಂಧಿ, ಹಾಗೂ ಭಾರತ ದೇಶದ ಮಹಾನ್ ಪುರುಷರ ಚಿತ್ರಗಳು ಎಂದೆಂದಿಗೂ ಜೀವಕಳೆಯಿಂದ ಕಂಗೊಳಿಸುತ್ತಿರುತ್ತವೆ. ಸಾಗರೋತ್ತರ ದೇಶಗಳಲ್ಲಿಯೂ ಇವರ ಕೃತಿಗಳು ಜನಪ್ರಿಯವಾಗಿವೆ. ಹಾಗೂ ಸಂಯೋಜನಾ ಕಲಾಕೃತಿಗಳನ್ನು ಮತ್ತು ಪ್ರಕೃತಿ ಚಿತ್ರಣಗಳನ್ನು ಅವರದೇ

---

೬. ಡಾ. ಪುಷ್ಪದ್ರಾವೀಡ್ ಚಿತ್ರಕಲಾವಿದೆ, ಸಂದರ್ಶನ ಅಗಸ್ಟ್, ೨೦೦೯

ಆದ ಶೈಲಿಯಲ್ಲಿ ಚಿತ್ರರಚನೆ ಮಾಡಿರುವುದನ್ನು ನಾವು ಕಾಣಬಹುದು."[೭] ಇಂತಹ ಅನೇಕ ಸಾಧನೆಗೈದು ದಿನಾಂಕ ೧.೧.೧೯೯೧ರಂದು ಕಲಾವಿದ ಕುಕ್ಕೆಯವರು ನಿಧನರಾದರು.

**ಕೆ.ಕೆ. ಹೆಬ್ಬಾರ :** "೧೯೧೨ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕಿಟ್ಟೆನಗೇರಿ ಹಳ್ಳಿಯಲ್ಲಿ ಜನಿಸಿದ. ಇವರು ೧೯೩೮ರಲ್ಲಿ ಮುಂಬೈ ಸರ್.ಜೆ.ಜೆ. ಸ್ಕೂಲ್ ಆಫ್ ಆರ್ಟ್ಸ್‌ನಲ್ಲಿ ಡಿಪ್ಲೋಮಾ ಪದವಿಯನ್ನು ಪಡೆದರು. ಇವರು ಕಲೆಯ ವಿಶೇಷ ಅಭ್ಯಾಸಕ್ಕಾಗಿ ಯುರೋಪ್, ರಶಿಯಾ, ಪಶ್ಚಿಮ ಜರ್ಮನಿ, ಹೀಗೆ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಪದವಿಯನ್ನು ಪಡೆದುಕೊಂಡು ಬಂದರು." ಇವರು ಹೆಚ್ಚು ಹಳ್ಳಿಯ ದೃಶ್ಯಗಳನ್ನು ಆಧಾರವಾಗಿ ಇಟ್ಟುಕೊಂಡು ಚಿತ್ರರಚನೆ ಮಾಡಿದ್ದಾರೆ. ಹಾಗೂ ಸಂಯೋಜನ ಚಿತ್ರಗಳನ್ನು ರಚನೆ ಮಾಡಿದ್ದಾರೆ. ಉದಾಹರಣೆ ಹಳ್ಳಿಯ ದೃಶ್ಯಗಳಲ್ಲಿ ಊಟದ ದೃಶ್ಯ, ದನಗಳ ಮಾರುಕಟ್ಟೆ, ಬಿಕ್ಷುಕ, ಕಟ್ಟಡಗಳು, ತಾಯಿ-ಮಗು, ನಾಗರಪಂಚಮಿ, ಹಂಚುತಯಾರಿಸುವ ಕಾರ್ಖಾನೆ, ಲಂಡನ್ ಪಟ್ಟಣದ ಓಣಿಗಳ ದೃಶ್ಯ, ಕೋಳಿಗಳ ಕಾದಾಟ ಇತ್ಯಾದಿ ಕಲಾಕೃತಿಗಳನ್ನು ನಾವು ಗಮನಿಸಬಹುದು. ಹೀಗೆ ಅನೇಕ ಚಿತ್ರಗಳನ್ನು ತೈಲವರ್ಣಗಳ, ಇಂಕು, ಪೋಸ್ಟರ್ ಈ ಮಾಧ್ಯಮಗಳ ಮೂಲಕ ರಚಿಸಿದ್ದಾರೆ. ಇವರು "ತಮ್ಮ ಜೀವನದಲ್ಲಿ ಮಾನವೀಯತೆಗೆ ಹೆಚ್ಚು ಪಾಶಸ್ತ್ಯ ನೀಡಿದ ಹೆಬ್ಬಾರರು ೨೬.೩, ೧೯೯೬ರಂದು ನಿಧನರಾಗಿದ್ದಾರೆ."[೮]

**ಎಂ.ಟಿ.ವಿ. ಆಚಾರ್ಯ :** "ಮೈಸೂರಿನಲ್ಲಿ ೧೯೨೦ರಲ್ಲಿ ಜನಿಸಿದ ಆಚಾರ್ಯರು ತಮ್ಮ ಮೆಟ್ರಿಕ್ ವ್ಯಾಸಂಗ ಮುಗಿಸಿ, ಚಾಮರಾಜೇಂದ್ರ ಕಲಾಶಾಲೆಗೆ ಸೇರಿ ೧೯೪೦ ರಲ್ಲಿ ಡಿಪ್ಲೋಮಾ ಪಡೆದರು. ೧೯೪೬ರಲ್ಲಿ ಚಂದಮಾಮ ಮಾಸಿಕದ ಕಲಾವಿದರಾಗಿ ಮತ್ತು ೧೯೬೩-೬೫ರವರೆಗೆ 'ತಾಯಿನಾಡು' ಪತ್ರಿಕೆಯ ಕಲಾನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ." ಇವರು "ಪ್ರಕೃತಿ ಚಿತ್ರಗಳು, ಜನಸಾಮಾನ್ಯರ ಚಿತ್ರಗಳು, ಮಹಾಭಾರತದ ಸರಣಿ ಚಿತ್ರಗಳು ಮಹಾಕಾವ್ಯವನ್ನು ಆಳವಾಗಿ ಅಭ್ಯಾಸಮಾಡಿ ಅದಕ್ಕೆ ನಿಷ್ಠರಾಗಿ ಒಬ್ಬ ಭಕ್ತ ಕಲಾವಿದನಂತೆ ಶ್ರದ್ಧೆಯಿಂದ ಈ ಸರಣಿಯನ್ನು ಚಿತ್ರಿಸಿದ್ದಾರೆ. ಇವರ ಚಿತ್ರಗಳಲ್ಲಿ ಗ್ರೀಕರು ಆದರ್ಶ ಶರೀರವುಳ್ಳ ಮಾನವನನ್ನೆ ದೈವತ್ವಕ್ಕೇರಿಸಿ ಚಿತ್ರಿಸಿದ್ದಾರೆ."[೯] ಆಚಾರ್ಯರು ಆರಿಸಿಕೊಳ್ಳದ ವಸ್ತುವಿಲ್ಲ ಭಾವಚಿತ್ರ ಸಂಯೋಜನೆ ಸಂದರ್ಭ ಚಿತ್ರಗಳಂತೆ ಈವರೆಗೆ ನೂರಾರು ಪ್ರಕೃತಿ ಚಿತ್ರಗಳನ್ನು ರಚಿಸಿದ್ದಾರೆ. ಇವರು ಕೂಡ ರುಮಾಲೆ ಚನ್ನಬಸವಯ್ಯನವರಂತೆ ಪ್ರಕೃತಿಯ ನಡುವೆಯೇ ಕುಳಿತು ಸ್ಥಳದಲ್ಲಿಯೇ ರಚಿಸಿದ ಈ ಕೃತಿಗಳಲ್ಲಿ ಅಲ್ಲಲ್ಲಿ ಕಾಗದದ ಬಿಳುಪನ್ನು ಹಾಗೆಯೇ ಇರಿಸಿಕೊಂಡು ಪಾರದರ್ಶಕ ವರ್ಣಗಳಲ್ಲಿ ಕ್ರಮವಾಗಿ ಬೆಳಕಿನಿಂದ ಕಪ್ಪು ಹಾಗೂ ದಟ್ಟವರ್ಣಗಳೆಡೆಗೆ ವಿವಿಧ

---

೭. ಅಶೋಕ ಟಿ. ಅಕ್ಕಿ ಅವರ ಕಲಾಚರಿತ್ರೆ, ಪ್ರಕಾಶನ ಎಂ.ಎಸ್. ಶಾ ಬುಕ್, ಗದಗ, ೧೯೯೮ ಪು. ೧೬೨

೮. ಅದೇ ಪು. ೧೫೭

೯. ಅದೇ ಪು. ೧೭೫

ಹಂತಗಳಲ್ಲಿ ಸಾಗುವ ಪ್ರಕ್ರಿಯೆ ಇರುವುದನ್ನು ಕಾಣಬಹುದು. ಹೀಗೆ ಕಲಾಕ್ಷೇತ್ರಕ್ಕೆ ಇವರು ದೊಡ್ಡಕೊಡುಗೆಯನ್ನು ಕೊಟ್ಟಿದ್ದಾರೆ.

**ಎಂ.ಎಸ್. ನಂಜುಂಡರಾವ್ :** "ನಂಜುಂಡರಾವ್ ಅವರು ಮಧುಗಿರಿ ತಾಲೂಕಿನ ಶುದ್ಧ ಕುಂಬೇ ಗ್ರಾಮದ ಶಾಲಾ ಉಪಾಧ್ಯಾಯ ಶ್ರೀ ಎಂ.ಎಸ್. ದಾಸಪ್ಪನವರ ಪುತ್ರ, ಇವರು ೧೯೫೨ರಲ್ಲಿ ಮೈಸೂರು ಚಾಮರಾಜೇಂದ್ರ ತಾಂತ್ರಿಕ ಕಲಾಶಾಲೆಯಲ್ಲಿ ಡಿಪ್ಲೋಮಾ ಪದವಿಯನ್ನು ಪಡೆದುಕೊಂಡವರು. ಕರ್ನಾಟಕದ ಸಾಂಪ್ರದಾಯಿಕ ಚಿತ್ರಗಳ ಹಾಗೂ ಕರ್ನಾಟಕದ ತೊಗಲುಬೊಂಬೆ ಕುರಿತು ನಂಜುಂಡ ರಾಯರು ಭಾರತದ ವಿಶ್ವವಿದ್ಯಾಲಯಗಳಲ್ಲದೇ ಅಮೇರಿಕೆಯ ಸ್ಮಿತ್ ಸೋನಿಯನ್ ಸಂಸ್ಥೆಯಲ್ಲೂ ಭಾಷಣಮಾಡಿದ್ದಾರೆ[೧೦]". ಇವರು ಹೆಚ್ಚು ಮೈಸೂರು ಸಾಂಪ್ರದಾಯಿಕ ಕಲಾಕೃತಿಗಳನ್ನು ರಚಿಸಿರುವುದು ಕಂಡುಬರುತ್ತಿದೆ. ಮತ್ತು ಮಾನವನಾಕೃತಿಯ ಸಂಯೋಜನ ಚಿತ್ರಗಳನ್ನು ರಚಿಸುತ್ತಿದ್ದರು. ಇವರು ರುಮಾಲೆಯವರೊಂದಿಗೆ ಚಿತ್ರಕಲಾ ಪರಿಷತ್‌ನಲ್ಲಿ ಒಟ್ಟುಗೂಡಿ ಕೆಲಸಮಾಡಿದ್ದಾರೆ. ಹೀಗೆ ಸಮಕಾಲೀನ ಕಲಾವಿದರುಗಳು ಹೆಚ್ಚು ವಸ್ತುವಿಷಯವನ್ನು ಆಯ್ಕೆಮಾಡಿಕೊಂಡಿದ್ದು ಪೌರಾಣಿಕ ಸನ್ನಿವೇಶಗಳ ಚಿತ್ರ, ಹಳ್ಳಿಯ ದೃಶ್ಯಗಳ ಚಿತ್ರ ಹಾಗೂ ಇತರೆ ಸಂಯೋಜನ ಚಿತ್ರಗಳನ್ನು ನೈಜ ರೀತಿಯಲ್ಲಿ ಮತ್ತು ಪಾರದರ್ಶಕವಾಗಿ ಚಿತ್ರಿಸಿದ್ದಾರೆ. ಆದರೆ ರುಮಾಲೆಯವರು ಇವರೆಲ್ಲರಿಗಿಂತ ಭಿನ್ನವಾಗಿ ಕೃತಿಯ ಸರಣಿ ಚಿತ್ರಗಳನ್ನು ನವ್ಯ ಶೈಲಿಯಲ್ಲಿ ಅಳವಡಿಸಿಕೊಂಡು "ಇಂಪ್ರೇಷನಿಸಂ" ಶೈಲಿಯಲ್ಲಿ ವಿಶಿಷ್ಟವಾದ ಮೈವಳಿಕೆಯ ರಚನೆಯಲ್ಲಿ ಅವರದೇ ಆದ ಕಲಾಶೈಲಿಯನ್ನು ಸೃಷ್ಟಿಸಿಕೊಂಡು ಕಲಾರಚನೆ ಮಾಡುವುದರ ಮೂಲಕ ಭಾರತೀಯರಲ್ಲಿ ಕಾಣಲಾಗದ ವಿಶಿಷ್ಟ ಶೈಲಿಯನ್ನು ತನ್ನ ಚಿತ್ರಗಳ ಮುಖಾಂತರ ತೋರಿಸಿ ಕೊಟ್ಟಿದ್ದಾರೆ ಎಂದು ಹೇಳಿದರೆ ತಪ್ಪಾಗಲಾರದು ಎಂಬ ಈ ಮಾತುಗಳನ್ನು ಚಿತ್ರಕಲಾವಿದೆ ಹಾಗೂ ಭಾರತೀಯ ಶ್ರೇಷ್ಠ ಕ್ರಿಕೇಟ್‌ತಾರೆ ಎನಿಸಿಕೊಂಡ ರಾಹುಲ್‌ದ್ರಾವಿಡಗೆ ಜನ್ಮವಿತ್ತ ಮಹಾತಾಯೆ ಡಾ. ಪುಷ್ಪದ್ರಾವಿಡರವರು ಈ ರೀತಿ ಅಭಿಪ್ರಾಯ ಪಡುತ್ತಾರೆ.

ರುಮಾಲೆಯವರು ಕಲಾಬದುಕಿನಲ್ಲಿ ಗಂಭಿರವಾಗಿ ತೊಡಗಿಸಿಕೊಂಡ ಈ ಶತಮಾನದ ಶ್ರೇಷ್ಠ ಕಲಾಕಾರರೆಂದೇ ಹೇಳಬಹುದು. ಇವರು ಯಾವುದೇ ಸರ್ಕಾರಿ ಕೆಲಸಕ್ಕೆ ಅವಲಂಬಿಸಿದವರಲ್ಲ ಇವರು ಕಲಾ ಚಟುವಟಿಕೆ ಮತ್ತು ಅದರ ಬೆಳವಣಿಗೆಯತ್ತ ಇವರ ಲಕ್ಷಣಗಳಿದ್ದವು. ಅಲ್ಲದೆ ಇವರು ಸದಾ ಪ್ರಕೃತಿ ಚಿತ್ರವನ್ನು ಮೈಗೂಡಿಸಿಕೊಂಡಿದ್ದರಿಂದ ಅವರ ಕಾಲದಲ್ಲಿ ಯಾವುದೇ ಸರ್ಕಾರಿ ಅಧೀನದಲ್ಲಿರು ವಂತೆ ಪಿ.ಡಬ್ಲ್ಯೂ.ಡಿ. ಇಲಾಖೆಯ ಕೆಲವು ನೀರಾವರಿ ಯೋಜನೆಯಲ್ಲಿ ಬರುವಂತಹ ಪ್ರಾಜಕ್ಟ್ ಕೆಲಸ ಗಳನ್ನು ಸರ್ಕಾರಿ ಇಲಾಖೆಯ ಅಧಿಕಾರಿಗಳು ರುಮಾಲೆಯವರಿಗೆ ಪತ್ರಗಳ ಮೂಖಾಂತರ ಸಂಪರ್ಕಿಸಿ ಪ್ರಕೃತಿ ಚಿತ್ರಗಳನ್ನು ಬರೆಯುವಂತೆ ನಿರ್ವಹಿಸುತ್ತಿದ್ದರು. ಹೆಚ್.ಡಿ. ದೇವೇಗೌಡರವರು ೧೯೮೪ರಲ್ಲಿ

---

೧೦. ಅಶೋಕ ಟಿ. ಅಕ್ಕಿ ಅವರ ಕಲಾಚರಿತ್ರೆ, ಪ್ರಕಾಶನ ಎಂ.ಎಸ್. ಶಾ ಬುಕ್, ಗದಗ, ೧೯೯೮ ಪು. ೧೬೭

ಲೋಕೋಪಯಾಗಿ ಮತ್ತು ನೀರಾವರಿ ಸಚಿವರಾಗಿದ್ದಾಗ ರುಮಾಲೆಯವರಿಗೆ ಪತ್ರದ ಮುಖಾಂತರ ನೀರಾವರಿ ಯೋಜನೆಗೆ ಸಂಬಂಧ ಪಟ್ಟಂತೆ, ಕಾವೇರಿ ನದಿಯ ಉಗಮ ಸ್ಥಾನವಾದ ತಲಕಾವೇರಿಯಿಂದ ಮೇಕೆ ದಾಟುವರೆಗಿನ ಪ್ರಕೃತಿ ಚಿತ್ರಗಳನ್ನು ಜಲವರ್ಣದಲ್ಲಿ ಚಿತ್ರಿಸುವುದರ ಬಗ್ಗೆ ಇರುವ ಯೋಜನೆ ಯನ್ನು ಯೋಗ್ಯರೀತಿಯಲ್ಲಿ ಕಾರ್ಯಗತಗೊಳಿಸುವ ಬಗ್ಗೆ ಕ್ರಮಕೈಗೊಳ್ಳಲಾಗುವುದು ಎಂದು ರುಮಾಲೆ ಯವರಿಗೆ ಬರೆದ ಪತ್ರದಲ್ಲಿ ತಿಳಿಸಿದ್ದಾರೆ. ರುಮಾಲೆಯವರು ಪತ್ರ ಬಂದ ಕೂಡಲೆ ಸಂಬಂಧಿಸಿದ ಅಧಿಕಾರಿಗಳೊಂದಿಗೆ ಚರ್ಚಿಸಿ ಅವರಿಗೆ ಬೇಕಾದ ಅನುಕೂಲತೆಗಳನ್ನು ಪಡೆದು; ಪ್ರಕೃತಿ ಚಿತ್ರಣ ಬರೆಯಲು ತೊಡುಗುತ್ತಾರೆ. ಅವರ ಸಹಾಯಕ್ಕೆ ಒಬ್ಬ ಪರಿಚಯ ವ್ಯಕ್ತಿಯನ್ನು ಕರೆದುಕೊಂಡು ಹೋಗಿ ಪ್ರಕೃತಿ ಚಿತ್ರಗಳನ್ನು ಬರೆಯಲು ಪ್ರಾರಂಭಿಸುತ್ತಾರೆ. ಸರ್ಕಾರವು ಐದು ವರ್ಷಗಳಲ್ಲಿ ಒಬ್ಬ ಐವತೊಂದು ಕೃತಿಗಳನ್ನು ರಚಿಸಲು ರಾಜ್ಯಸರ್ಕಾರ ಅನುಮತಿ ನೀಡಿತ್ತು. ಆದರೆ ರುಮಾಲೆಯವರು ಆ ಯೋಜನೆಯನ್ನು ಪೂರ್ಣಗೊಳಿಸಲು ಆಗದೇ ಬರಿ ಹನ್ನರೆಡು ಕಲಾಕೃತಿಗಳನ್ನು ಮಾತ್ರ ಮಾಡುತ್ತಾರೆ. ಅಷ್ಟರಲ್ಲಿ ಬೆಂಗಳೂರಿನಲ್ಲಿ ಪ್ರಕೃತಿರಚನೆ ಮಾಡಲೆಂದು ಹೋದಾಗ ಶಾಶಕರ ಭವನದ ಮುಂದೆ ಅವರಿಗೆ ಅಪಘಾತವಾಗುತ್ತದೆ. ಇದರಿಂದ ಇವರು ತುಂಬಾ ಅಘಾತಗೊಂಡು ಅಂದಿನಿಂದಲೆ ಪ್ರಕೃತಿ ಚಿತ್ರಣ ಮಾಡಲು ಬಿಟ್ಟೆಬಿಟ್ಟರು. ಕೊನೆಗೆ ಪ್ರಬ್ರವರಿ ೫ ೧೯೮೮ರಂದು ನಿಧನರಾಗುತ್ತಾರೆ."[೧೧] ಇಂತಹ ಮಹಾನ್ ಕಲಾವಿದರು ಜನಿಸಿದ ಈ ಪುಣ್ಯಭೂಮಿ ಸಾಂಸ್ಕೃತಿಕ ಹಿರಿಮೆಯ ಪ್ರತೀಕವಾಗಿದೆ. ಇವರ ಕಲಾ ಕೃತಿಗಳು ದೇಶ ವಿದೇಶಗಳಲ್ಲಿ ಪ್ರದರ್ಶಿತಗೊಂಡು ಜನಮನ ಸೂರೆಗೊಂಡಿವೆ. ಇವರ ಕಲಾಕೃತಿಗಳನ್ನು ಹಲವಾರು ವಸ್ತು ಸಂಗ್ರಹಾಲಯಗಳಲ್ಲಿ ಕಾದಿರಿಸಲಾಗಿದೆ. ಈಗ ಅವರ ಕಲಾಕೃತಿಯಲ್ಲಿ ರುಮಾಲೆಯವರ ವ್ಯಕ್ತಿತ್ವ ಅಡಗಿದೆ.

### ರುಮಾಲೆ ಆರ್ಟ್‌ಗ್ಯಾಲರಿಯನ್ನು ವೀಕ್ಷಣೆ ಮಾಡಿದ ವಿದ್ವಾಂಸರ ಅಭಿಪ್ರಾಯಗಳು

"ರುಮಾಲೆಯವರ ಚಿತ್ರಕಲಾರಾಧನೆ ನಿಜವಾಗಿಯೂ ಅತಿದೊಡ್ಡ ತಪಸ್ಸು"[೧೨] ಎಂಬ ಮೌಲಿಕವಾದ ವಾಕ್ಯವನ್ನು ೨೪.೧೧.೧೯೭೭ರಲ್ಲಿ ಮಾಜಿ ಮುಖ್ಯಮಂತ್ರಿ ಹಾಗೂ ಕೇಂದ್ರ ಕಾನೂನು ಸಚಿವರಾದ ಎಂ. ವೀರಪ್ಪ ಮೊಯ್ಲಿಯವರು ಅಭಿಪ್ರಾಯ ಕಿರುಒತ್ತಿಗೆಯೊಂದರಲ್ಲಿ ಅವರ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

"ನಿಜವಾಗಿಯೂ ಕಲಾ ಪ್ರಪಂಚದಲ್ಲಿ ನಿಮ್ಮದೇ ಆದ ಸ್ಥಾನವೊಂದನ್ನು ಗಳಿಸಿಕೊಂಡಿದ್ದೀರಿ. ಅದನ್ನು ಉಳಿಸಿಕೊಂಡು ಪ್ರಾಚೀನ ತಜ್ಞರು ಮಾಡಿರುವಂತೆ ನೀವೂ ಅವರ ಕೃತಿಗಳನ್ನು ರೂಢಿಸ

---

೧೧. ರುಮಾಲೆ ಆರ್ಟ್ ಗ್ಯಾಲರಿ ಕಿರು ಹೊತ್ತಿಗೆಯ ಸಂಗ್ರಹ, ೧೯೭೨

೧೨. ಅದೇ.

ಬೇಕೆಂಬುದೇ ನನ್ನ ಆಸೆ”[೧೩] ಎಂಬ ಅಭಿಪ್ರಾಯವನ್ನು ದಿನಾಂಕ ೦೩.೦೮.೧೯೬೫ರಲ್ಲಿ ಕೆಂಗಲ್ ಹನುಮಂತರಾಯನವರು ರುಮಾಲೆಯವರನ್ನು ಕುರಿತು ಹಂಚಿಕೊಂಡಿದ್ದಾರೆ.

“ನಿಮ್ಮದೇ ಆದ ಕಲಾಪ್ರದರ್ಶನ ಶಾಲೆಯನ್ನು ವ್ಯವಸ್ಥೆಗೊಳಿಸಲು ಸಾಧ್ಯವಾಯಿತು ಎಂಬುದು ತಿಳಿದು ಸಂತೋಷವಾಯಿತು”[೧೪] ಎಂಬ ಈ ಮಾತನ್ನು ರಾಷ್ಟ್ರಕವಿ ಕುವೆಂಪುರವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

“ಜಲವರ್ಣ ಚಿತ್ರಗಳಲ್ಲಿ, ರುಮಾಲೆಯವರ ಕೃತಿಗಳು ಮಹೋನ್ನತವಾದವು. ಪ್ರಪಂಚದ ಪ್ರತಿಭಾವಂತ ಕಲಾವಿದರಿಗಿರುವಂತೆ ಅವರಿಗೂ, ಅವರದೇ ಆದ ಒಂದು ವೈಯಕ್ತಿಕ ಶೈಲಿ ಇದೆ. ಅವರ ಕೃತಿಗಳು ಯಾವುದೇ ಅಂತಾರಾರಾಷ್ಟ್ರೀಯ ಕಲಾಪ್ರದರ್ಶನದಲ್ಲಾದರೂ ಶೋಭೆತರುವಂಥವು ಗಳಾಗಿದ್ದು ಶಾಶ್ವತವಾಗಿರುವಂಥವು”[೧೫] ಎಂಬ ನುಡಿಮುತ್ತನ್ನು ದಿ. ರಾಜರವಿವರ್ಮ ಅವರ ಮೊಮ್ಮಮಗಳು, ಕಲಾವಿದೆ ರುಕ್ಮಿಣಿವರ್ಮರವರು ಈ ರೀತಿಯಾಗಿ ತಮ್ಮ ಅಭಿಪ್ರಾಯವನ್ನು ಹಂಚಿಕೊಂಡಿದ್ದಾರೆ.

ಮಾನವ ಕೃತಿ ಮತ್ತು ಪ್ರಕೃತಿ ಪ್ರೇಮ ಇವುಗಳಲ್ಲಿ ಗಾಢ ನಂಬಿಕೆ ಇರುವ ರುಮಾಲೆಯವರ ದೃಷ್ಟಿಕೋನ ಶ್ರದ್ಧೆಯಿಂದ ಕೂಡಿದ್ದು, ಅವರ ಪ್ರಕಟಣ ಶಕ್ತಿ ಕಲಾದೃಷ್ಟಿಯಿಂದ ಸಮ್ಮತವಾದುದ್ದು, ಕಾರಣ ಅವರ ಸಹಜ ಪ್ರತಿಕ್ರಿಯೆಗಳನ್ನು ಚಿತ್ರಗಳಲ್ಲಿ ಮೂಡಿಸಿದ್ದಾರೆ. ಅವರ ಚಿತ್ರಗಳು ಕೇವಲ ದಾಖಲೆ ಮತ್ತು ವಿವರಣೆಯೇ ಅಲ್ಲದೆ ಮಾನವೀಯ ಕಲ್ಪನೆಯ ಸೌಂದರ್ಯದ ಬಗ್ಗೆ ಅವರಿಗಿರುವ ಅತೀವ ಪ್ರೇಮದ ದ್ಯೋತಕ ಹಾಗೂ ಕಲಾವಿದನ ಸಾಕ್ಷ್ಯ ಅವರ ಚಿತ್ರಗಳಲ್ಲಿ ನಾವವರನ್ನೇ ಕಾಣುತ್ತೇವೆ; ಕಾರಣ ಅವರ ಚಿತ್ರಗಳು ಅವರ ದೇಶದ ಪ್ರಕೃತಿ ಹಾಗೂ ಜನತೆಯ ಬಗ್ಗೆ ಅವರಿಗಿರುವ ಅಪಾರ ಪ್ರೇಮವನ್ನು ವ್ಯಕ್ತಪಡಿಸುತ್ತವೆ” ಎಂದು ಕೆ.ಸಿ. ಫಣಿಕ್ಕರ್ ಹೇಳಿದ್ದಾರೆ.

“ರುಮಾಲೆಯವರೆ ನಿಮ್ಮ ‘ಕಲಾಕುಟೀರಕ್ಕೆ ಭೇಟಿ ಇತ್ತು ನನಗೆ ಬಹಳ ಸಂತೋಷವಾಯಿತು. ಕಲಾಕ್ಷೇತ್ರದಲ್ಲಿನ ನಿಮ್ಮ ಶ್ರದ್ಧಾವಂತ ಕೃತಿಗಳಿಗಾಗಿ ನನ್ನ ಹಾರ್ದಿಕ ಶುಭಾಶಯಗಳು”[೧೬] ಎಂಬ ಈ ಕಿರು ನುಡಿಯನ್ನು ದಿನಾಂಕ ೮.೫.೧೯೭೦ರಲ್ಲಿ ಕೆ.ಸಿ. ರೆಡ್ಡಿಯವರು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

“ರುಮಾಲೆಯವರು” ಜಲವರ್ಣ ಮಾಧ್ಯಮವನ್ನೂಪಯೋಗಿಸಿ ಕಲಾಕೃತಿಗಳನ್ನು ಮಾಡುವವರು ಈಗ ನಮ್ಮ ದೇಶದಲ್ಲಿ ಅತಿ ವಿರಳ. ಶ್ರೀ ರುಮಾಲೆ ಚನ್ನಬಸವಯ್ಯನವರು ಪ್ರಕೃತಿಯ ಸನ್ನಿವೇಶ

---

೧೩. ರುಮಾಲೆ ಆರ್ಟ್ ಗ್ಯಾಲರಿ ಕಿರು ಹೊತ್ತಿಗೆಯ ಸಂಗ್ರಹ, ೧೯೭೨

೧೪. ಅದೇ.

೧೫. ಅದೇ.

೧೬. ಅದೇ.

ಚಿತ್ರಣವನ್ನು ವಿಶೇಷವಾಗಿ ಮಾಡಿದ್ದಾರೆ. ಈಗ ಇಂಥ ಚಿತ್ರಗಳನ್ನು ಮಾಡುವವರು ಕಡಿಮೆಯೇ ಅವರ ಕಲಾರಾಧನೆಗೆ ಇನ್ನಾದರೂ ತಕ್ಕ ಮಾನ್ಯತೆ ದೊರೆಯಬೇಕು"[೧೭] ಎಂಬ ಅನಿಸಿಕೆಯನ್ನು ರಾಮನಿವಾಸ್ ಮಿರ್ದ ಉಪಾಧ್ಯಕ್ಷ ರಾಜ್ಯಸಭೆ ಅಧ್ಯಕ್ಷ ಲಲಿತಾಕಲಾ ಅಕಾಡೆಮಿ ನವದೆಹಲಿ ಇವರು ವ್ಯಕ್ತಪಡಿಸಿದ್ದಾರೆ.

"ಪುಷ್ಪಭರಿತವಾದ ಬೆಂಗಳೂರು ನನ್ನ ಸ್ಮೃತಿಯಲ್ಲಿ ಚೆನ್ನಾಗಿ ಉಳಿದಿದೆ. ದೊಡ್ಡ ದೊಡ್ಡ ಜಲವರ್ಣ ಚಿತ್ರಗಳು ಕಣ್ಣುಗಳನ್ನು ಉದ್ಯಾನವನಗಳ ಶೀತಲ ಪ್ರದೇಶದವರೆಗೂ ಕೊಂಡೊಯ್ಯುವಂತೆ ಭಾಸವಾಗುತ್ತದೆ. ಅವುಗಳಲ್ಲಿನ ವರ್ಣ-ಮೃದುವಾಗಿಯೂ ಶುದ್ಧವಾಗಿಯೂ ಇದೆ. ತೈಲವರ್ಣ ಚಿತ್ರಗಳಲ್ಲಿ ನಿಖರವಾದ ವರ್ಣ ಸಂಯೋಜನೆ ಇದೆ. ಇವೆಲ್ಲವೂ ನನ್ನ ಸ್ಮೃತಿಪಟಲದಲ್ಲಿ ಅಚ್ಚಳಿಯದೆ ಉಳಿದಿದೆ"[೧೮] ಇದನ್ನು ರೆವರೆಂಡ್-ಇ ದಚ್. ರಾಬರ್ಟ್ ಸನ್, ಎಂ.ವಿ. ಬಿ.ಎಸ್.ಸಿ. (ಬಿ.ಬಿ.ಸಿ. ಲಂಡನ್) ರವರು ಅನಿಸಿಕೆಗಳನ್ನು ವ್ಯಕ್ತಪಡಿಸಿದ್ದಾರೆ.

ರುಮಾಲೆಯವರ ಚಿತ್ರಗಳು ಮಾತ್ರ ನನ್ನ ಕಲ್ಪನೆಯ ಮಟ್ಟವನ್ನು ಮುಟ್ಟಿವೆ. ಅವುಗಳಲ್ಲಿ 'ತುಂಗಭದ್ರ ಅಣೆಕಟ್ಟೆ'ಯ ದೃಶ್ಯ ಉನ್ನತವಾದುದು ಎಂಬ ಅನಿಸಿಕೆಯನ್ನು ದಿ.ಎಸ್. ನಂಜುಂಡಸ್ವಾಮಿ ಮೈಸೂರುರವರು ಹಂಚಿಕೊಂಡಿದ್ದಾರೆ.

"ಜೀವನದ ನಾನಾ ರಂಗಗಳಲ್ಲಿ ನಿಸ್ವಾರ್ಥ ಸೇವೆ ಸಲ್ಲಿಸಿದ ರುಮಾಲೆ ಚನ್ನಬಸವಯ್ಯನವರು ನಿಸರ್ಗ ದೃಶ್ಯಗಳ ವರ್ಣ ಚಿತ್ರಗಳನ್ನು ಬರೆಯುವುದರಲ್ಲಿ ಪ್ರಸಿದ್ಧಿ ಪಡೆದಿರುವುದು ಕರ್ನಾಟಕಕ್ಕೆ ಹೆಮ್ಮೆಯ ಸಂಗತಿ "ರುಮಾಲೆ ಆರ್ಟ್" ಗ್ಯಾಲರಿಯಲ್ಲಿ ಪ್ರದರ್ಶಿಸಲ್ಪಡುವ ಕಲಾಕೃತಿಗಳು ಕಲಾ ಪ್ರೇಮಿಗಳಿಗೆ ರಸದೌತಣವನ್ನು ದೊರಕಿಸಲಿ ಎಂದು ಹಾರೈಸುವೆ"[೧೯] ಎಂಬ ಆಶಾದಾಯಕ ಮಾತುಗಳಿಂದ ಆರ್ಟ್‌ಗ್ಯಾಲರಿಗೆ ಶುಭಾಷೆಯಗಳನ್ನು ಕೋರಿದ್ದಾರೆ. ದಿ. ದೇವರಾಜ್ ಅರಸ್‌ರವರು.

"ರುಮಾಲೆಯವರ ಕಲಾಭವನವನ್ನು ಸಂದರ್ಶಿಸುವುದು ಒಂದು ಉನ್ನತ ಅನುಭವ ನಿಸರ್ಗ ದೇವತೆಯ ಹಲವಾರು ಭಾವನೆಗಳನ್ನು ಯಶಸ್ವಿಯಾಗಿ ಮೂಡಿಸಿರುವ ಅವರ ಕಲಾಕೃತಿಗಳು ನನಗೆ ಬಹಳ ಮೆಚ್ಚುಗೆಯಾಗಿದೆ. ಇಲ್ಲಿ ಕಲಾವಿದನ ವಿಶೇಷ ಸಾಧನೆ ವ್ಯಕ್ತವಾಗಿದೆ. ಅವರ ಕಲಾಕೃತಿಗಳು ಉನ್ನತ ಮಟ್ಟದ್ದಾಗಿದ್ದು ಸರ್ಕಾರ ಹಾಗೂ ಸಾರ್ವಜನಿಕ ಕಲಾಪ್ರೇಮಿಗಳ ಪ್ರೋತ್ಸಾಹವನ್ನರಡುತ್ತವೆ"[೨೦] ಎಂಬ ಆಶೀರ್ವಾಚನದ ನುಡಿಗಳನ್ನು ಶ್ರೀ ಬಿ.ಡಿ. ಜತ್ತಿಯವರು ಹೇಳಿದ್ದಾರೆ.

---

೧೭. ರುಮಾಲೆ ಆರ್ಟ್ ಗ್ಯಾಲರಿ ಕಿರು ಹೊತ್ತಿಗೆಯ ಸಂಗ್ರಹ, ೧೯೭೨

೧೮. ಅದೇ.

೧೯. ಅದೇ.

೨೦. ಅದೇ.

ರುಮಾಲೆಯವರ ಕೃತಿಗಳನ್ನು ನೋಡಿ ತಂತ್ರ, ಭಾವ ಮತ್ತು ಸಾಮರ್ಥ್ಯದಲ್ಲಿ ಸರ್ವೇಸಾಮಾನ್ಯರಿಗೆ ಪ್ರಿಯವಾಗುವಂತಿರುವ ನಿಮ್ಮ ಕಲೆಯನ್ನು ನೋಡಿದಾಗ, ನಿಸರ್ಗಕ್ಕೂ ನಿಮಗೂ ಇರುವ ಬಂಧುತ್ವದ ಅರಿವಾಯಿತು, ನಿಮ್ಮ ಶುದ್ಧ ಆಶಯವೇನೆಂಬುದೂ ತಿಳಿಯಿತು, ನಿಮ್ಮ ದೊಡ್ಡ ಹಾಗೂ ಚಿಕ್ಕ ಜಲವರ್ಣ ಚಿತ್ರಗಳೆಲ್ಲವೂ ತೀರ ಪ್ರಭಾವಯುತವಾಗಿವೆ"[೨೧] ಎಂಬ ಆಶ್ಚರ್ಯಕರ ನುಡಿಗಳನ್ನು ಪಾಶ್ಚತ್ಯದೇಶದವರಾದ ಈಥರ್ ಎಸ್.ಬ್ಲಾಂಡ್, ಪಿ.ಹೆಚ್‌ಡಿ ಸಾನ್‌ಫ್ರಾನ್ಸಿಸ್ಕೊ, ಕ್ಯಾಲಿಪೋರ್ನಿಯರವರು ಹೀಗೆ ಹೇಳಿದ್ದಾರೆ.

"ಸೃಷ್ಟಿಯ ಸೊಬಗಿಗೆ ಮೆರಗು ಕೊಟ್ಟು ಪ್ರತಿ ಸೃಷ್ಟಿಯ ಮಾಡಿ ತನ್ಮೂಲಕ ಸೃಷ್ಟಿಕರ್ತನ ಕಂಡುಕೊಳ್ಳುವ ನೈಪುಣ್ಯತೆ ನಿಮ್ಮಲ್ಲಿ ಎದ್ದು ಕಾಣುವಂತಹದು"[೨೨] ಎಂಬ ಆಶೀರ್ವಾಚನ ಮಾತುಗಳೊಂದಿಗೆ ಆನಂದಪುರ ಶಿವಮೊಗ್ಗ ಜಿಲ್ಲೆಯ ಶ್ರೀ ಶ್ರೀ. ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಯವರು ಈ ನುಡಿ ಮುತ್ತುಗಳನ್ನು ನುಡಿದಿದ್ದಾರೆ.

"ರುಮಾಲೆಯವರ ಚಿತ್ರಗಳನ್ನು ನೋಡುತ್ತಾ ನಿಂತಾಗ ಪ್ರಕೃತಿಯ ಮಧ್ಯೆಯೆ ಇದ್ದೇವೇನೊ ಎಂಬ ಭಾವನೆ ಉಂಟಾಗುತ್ತದೆ. ಅವರ ಚಿತ್ರಗಳಲ್ಲಿ ನಾಲ್ಕನೇ ಆಯಾಮವೂರಿದೆಯೆಂಬುದು ನನ್ನ ಗ್ರಹಿಕೆ. ಅವುಗಳಲ್ಲಿ ಆತ್ಮಾಶಕ್ತಿ ಒಡಮೂಡಿದೆ. ಅವು ನೋಡುವವರ ಹೃದಯವನ್ನು ಮುಟ್ಟುತ್ತಾ.... ಅವು ಕನ್ನಡಿಗರ ಭಾರತೀಯರ ಸಂಪತ್ತು"[೨೩] ಎಂಬ ಭಾವನಾತ್ಮಕ ನುಡಿಗಳನ್ನು ಬಿ.ನ. ಮಂಗಳರವರು ಅನಿಸಿಕೆಯೊಂದರ ಕಿರು ಒತ್ತಿಗೆಯೆಲ್ಲಿ ವ್ಯಕ್ತಪಡಿಸಿದ್ದಾರೆ.

"ನಿಜವಾದ ಕಲೆಯೆ ತಳಹದಿ ಪ್ರಕೃತಿ, ಸಂಪ್ರದಾಯ ಮತ್ತು ಮೂಲಕೃತಿಗಳಲ್ಲಿರುತ್ತದೆ, ಎಂದು ಶಾಂತಿನಿಕೇತನದ ದಿವಂಗತ ನಂದಲಾಲ್ ಬೋಸ್ ಅಭಿಪ್ರಾಯ ಪಟ್ಟಿದ್ದಾರೆ. ಭಾರತದ ಜೀವನ ಮತ್ತು ಪ್ರಕೃತಿಯನ್ನು ರುಮಾಲೆಯವರು ಪ್ರಶಂಸೆ ಇದೆ. ಅವುಗಳಲ್ಲಿ ಮೂಲವಾದ ಸೃಷ್ಟಿಶಕ್ತಿ ಇರುವುದು ಕಾಣಬರುತ್ತದೆ. ಅವು ಸುಂದರ ಕೃತಿಗಳಾಗಿದ್ದು ರಸಾನುಭವನ್ನುಂಟು ಮಾಡುತ್ತವೆ. ರುಮಾಲೆಯವರ ಚಿತ್ರಗಳಲ್ಲಿನ ವರ್ಣ ವಿನ್ಯಾಸದಲ್ಲಿ ಸ್ಪಷ್ಟತೆ ಸೌಂದರ್ಯ ಮತ್ತು ಸಮರಸ ಇವೆ"[೨೪] ಎಂಬ ಕವಿತೆಯ ನುಡಿಗಳನ್ನು ಪಾಶ್ಚಿಮಾತ್ಯ ದೇಶದ ಡಾ. ಎಸ್. ತ್ಯುಲಯೇವ್ ೧೯೭೨ರ ನೆಹರು ಪಾರಿತೋಷಕ ವಿಜೇತ ರಷ್ಯಾದ ಸಾಂಸ್ಕೃತಿಕ ಸಚಿವ, ಶಾಖೆಯ ಪೂರ್ವ ವಿಭಾಗದ ಕಲಾಧಿಕಾರಿಗಳು ಈ ರೀತಿ ಹೇಳಿದ್ದಾರೆ.

---

೨೧. ರುಮಾಲೆ ಆರ್ಟ್ ಗ್ಯಾಲರಿ ಕಿರು ಹೊತ್ತಿಗೆಯ ಸಂಗ್ರಹ, ೧೯೭೨

೨೨. ಅದೇ.

೨೩. ಅದೇ.

೨೪. ಅದೇ.

"ರುಮಾಲೆಯವರು ಕಲಾಭವನವನ್ನು ವೀಕ್ಷಿಸುವುದು ನಿಜವಾಗಿಯೂ ಸಂತೋಷದ ಸಂಗತಿ, ಬೆಂಗಳೂರಿನ ಅದ್ಭುತ ಭೂದೃಶ್ಯಗಳನ್ನು ಜಲ ಮತ್ತು ತೈಲವರ್ಣಗಳಲ್ಲಿ ನಾನಲ್ಲಿ ಕಂಡೆ, ಹೂವರಳುತ್ತಿರುವ ವೃಕ್ಷಗಳು ಅಂಕುರಿಸುತ್ತಿರುವ ಬಳ್ಳಿಗಳು, ಕೆಂಪು, ಹಳದಿ ಬಣ್ಣಗಳು ತೋಯ್ದು ಭಾವಣೆಗಳು ಇವು ಅಲ್ಲಿನ ಚಿತ್ರಗಳಲ್ಲಿ ವಿಶೇಷವಾಗಿ ಕಾಣುತ್ತವೆ. ಊಹಿಸಲಾಗದ ಸ್ಥಳಗಳಲ್ಲಿ ನೀರಿನ ಬುಗ್ಗೆಗಳು, ಮಂದ ಬೆಳಕಿನಲ್ಲಿ ಪ್ರವಹಿಸುವ ನದಿಗಳು ಇವುಗಳನ್ನು ಅಲ್ಲಿ ಕಾಣಬಹುದು. ಅವರು ಚಿತ್ರಿಸಿರುವ ಶ್ರೀ ಶಿವಬಾಲಯೋಗಿಗಳ ಎರಡು ಭಾವ ಚಿತ್ರ ಸುಂದರವಾಗಿವೆ. ವರ್ಡ್ಸ್‌ವರ್ತ್ ಕವಿಯಂತೆ ರುಮಾಲೆಯವರೂ "ಪ್ರಕೃತಿಯ ಗುರುವಾಗಿರಲಿ" ಎಂದು ಹೇಳುತ್ತಾರೆ. ಇಂಥ ಸಾಂಸ್ಕೃತಿಕ ನೆಲೆಗಳನ್ನು ಬೆಂಗಳೂರಿನಲ್ಲಿ ಮಾಡಿರುವುದಕ್ಕಾಗಿ ಯಾರೆ ಆದರೂ ಕೃತಜ್ಞಾರಾಗಿರಬೇಕು.  ಶ್ರೀರುಮಾಲೆಯವರ ಕಲಾಭವನ ರಾಷ್ಟ್ರದ ಒಂದು ಸಾಂಸ್ಕೃತಿಕ ನೆಲೆ"[೨೫] ಎಂಬ ನುಡಿಗಳನ್ನು ನಾಡಿನ ಹೆಸರಾಂತ ಕವಿಗಳಾದ ವಿನಾಯಕ ಕೃಷ್ಣಗೋಕಾಕ್‌ರವರು ತಮ್ಮ ಅನಿಸಿಕೆಗಳನ್ನು ಈ ರೀತಿ ಹಂಚಿಕೊಂಡಿದ್ದಾರೆ.

**ರುಮಾಲೆಯವರ ಪ್ರವೃತ್ತಿ**

"ರುಮಾಲೆ ಚನ್ನಬಸವಯ್ಯನವರು ಚಿತ್ರಕಲಾ ಕ್ಷೇತ್ರದಲ್ಲಿಯೇ ಅಲ್ಲದೆ ಹಲವಾರು ಕ್ಷೇತ್ರಗಳಲ್ಲಿ ತೊಡಗಿದ್ದರು. ಇವರು ಸುಮಾರು ಹದಿನಾಲ್ಕು ಮತ್ತು ಹದಿನೈದನೆ ವಯಸ್ಸಿನಲ್ಲಿಯೆ ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಕರ್ನಾಟಕದ ಹಲವಾರು ಕಡೆ ಜೈಲುವಾಸವನ್ನು ಅನುಭವಿಸಿ ಸ್ವಾತಂತ್ರ್ಯ ಬರುವವರೆಗೂ ನಾನಾ ರೀತಿಯಲ್ಲಿ ದುಡಿದು ಅನಂತರ ಹತ್ತು ವರ್ಷಗಳ ಕಾಲ ಸೇವಾದಳವನ್ನು ಕಟ್ಟುವ ಮೂಲಕ ದೇಶಸೇವೆಯಲ್ಲಿ ತೊಡಗಿದ್ದರು. ಹಾಗೂ ಮೈಸೂರು ರಾಜ್ಯದ ವಿಧಾನ ಪರಿಷತ್ತಿನ ಸದಸ್ಯರಾಗಿ ಸಮಾಜ ಸೇವೆ ಸಲ್ಲಿಸಿದ ಹಿರಿಮೆ ನಮ್ಮ ರುಮಾಲೆ ಚನ್ನಬಸವಯ್ಯನವರದು ಮತ್ತು ೧೯೫೬-೧೯೬೦ರ ವರೆಗೆ 'ತಾಯ್ನಾಡು' ಎಂಬ ಕನ್ನಡ ದಿನಪತ್ರಿಕೆಯನ್ನು ಪ್ರಾರಂಭಿಸಿ ಅದರ ಮುಖ್ಯ ಸಂಪದಾಕರಾಗಿ ನಾಡಿನ ಭಾಷೆ ನೆಲ, ಜಲ, ಸಂಸ್ಕೃತಿ, ಕಲೆಯನ್ನು ಉಳಿಸಿಬೆಳಸಲು ನಿರಂತರವಾಗಿ ಶ್ರಮಿಸಿ ಬಹುಮುಖ ಪ್ರತಿಭೆಯ ಧೀಮಂತ ಹಾಗೂ ಅಸಮಾನ್ಯವಾದ ಬಹುಮುಖ ಪ್ರತಿಭೆಯ ವ್ಯಕ್ತಿ ಎನಿಸಿಕೊಂಡಿದ್ದಾರೆ."[೨೬]

**ಸ್ವಾತಂತ್ರ್ಯ ಚಳುವಳಿಯಲ್ಲಿ ರುಮಾಲೆ**

"ಮನುಕುಲದ ಇತಿಹಾಸದಲ್ಲಿ ಅದ್ವಿತೀಯ ಹಾಗೂ ಉಜ್ವಲ ಅಧ್ಯಾಯದ ವಿಷಯವಾಗಿರುವ ಭಾರತದ ಅದ್ಭುತ ಅಹಿಂಸಾತ್ಮಕ ಸ್ವಾತಂತ್ರ್ಯ ಸಮರದಲ್ಲಿ ಸ್ತುತ್ಯಾರ್ಹವಾದ ಪಾತ್ರವನ್ನು ಕರ್ನಾಟಕ ನಿರ್ವಹಿಸಿದೆ. ಈ ಚಳುವಳಿಗಳು ಮುಂಬೈ, ಮದ್ರಾಸ್ ಹಾಗೂ ಹೈದ್ರಾಬಾದ್ ಪ್ರಾಂತ್ಯಗಳ

---

೨೫. ರುಮಾಲೆ ಆರ್ಟ್ ಗ್ಯಾಲರಿ ಕಿರು ಹೊತ್ತಿಗೆಯ ಸಂಗ್ರಹ, ೧೯೭೨

೨೬. ಬಾಬುರಾವ್ ನಡೋಣಿ, ಚಿತ್ರಕಲಾವಿದ, ಸಂದರ್ಶನ ಸೆಪ್ಟೆಂಬರ್, ೨೦೦೯

ಭಾಗಗಳಾಗಿದ್ದವು. ಮೈಸೂರು, ಸಂಡೂರು ಮುಂತಾದವು ಆಶ್ರಿತ ಸಂಸ್ಥಾನಗಳಾಗಿದ್ದವು. ಭೌಗೋಳಿಕವಾಗಿ ಅದರ ಪ್ರಾಂತ್ಯಗಳು ಚದುರಿ ಹೋಗಿದ್ದವು. ಆದರೂ ರಾಷ್ಟ್ರೀಯ ಭಾವನೆ, ದೇಶಪ್ರೇಮ, ಹಾಗೂ ಸ್ವಾಂತ್ರ್ಯಪ್ರಿಯತೆ ಜನರ ಸಾಮಾನ್ಯ ಲಕ್ಷಣಗಳಾಗಿದ್ದವು. ಬ್ರಿಟಿಷ್‌ರ ಆಳ್ವಿಕೆಯನ್ನು ಅಳಿಸಿಹಾಕಿ ಸ್ವಾತಂತ್ರ್ಯದ ಸವಿಯನ್ನು ಅನುಭವಿಸಬೇಕೆಂಬ ಹೆಬ್ಬಯಕೆ ಅವರಲ್ಲಿ ಬಲವಾಗಿತ್ತು. ಕರ್ನಾಟಕದಲ್ಲಿ ನಡೆದ ಭಾರತದ ಸ್ವಾತಂತ್ರ್ಯ ಚಳುವಳಿಯನ್ನು ಮೂರು ಘಟ್ಟಗಳಲ್ಲಿ ಗುರುತಿಸಬಹುದು. ಮೊದಲನೆಯದಾಗಿ ಕರ್ನಾಟಕದ ಮಣ್ಣಿನಿಂದ ಬ್ರಿಟಿಷರನ್ನು ಹೊಡೆದೋಡಿಸಲು ಹೈದರಾಲಿ, ಟಿಪ್ಪುಸುಲ್ತಾನ್ ನಡೆಸಿದಯತ್ನ ಎರಡನೆಯದಾಗಿ ದತ್ತು ಮಕ್ಕಳಿಗೆ ರಾಜ್ಯಧಿಕಾರಕ್ಕೆ ಹಕ್ಕಿಲ್ಲ ಎಂದಾಗ ಬ್ರಿಟಿಷರ ನಿರಂಕುಶಾಧಿಕಾರದ ವಿರುದ್ಧ ಅನೇಕ ರಾಜರು ಹಾಗೂ ಅವರ ಯೋಧರು ಆಯುಧಗಳನ್ನು ಹಿಡಿದು ದಂಗೆ ಎದ್ದರು. ಮೂರನೆಯದಾಗಿ ಮಹಾತ್ಮಗಾಂಧಿ ಅವರ ನೇತೃತ್ವದ ಅಹಿಂಸಾತ್ಮಕ ಸತ್ಯಾಗ್ರಹ".[೨೭]

ಕರ್ನಾಟಕದಲ್ಲಿ ೧೮೫೭ ನಂತರದ ಸ್ವಾತಂತ್ರ್ಯ ಚಳುವಳಿ ಭಾರತದ ಇತರ ಭಾಗಗಳಂತೆ ಬ್ರಿಟಿಷರ ರಾಜಕೀಯ ಆರ್ಥಿಕ, ಸಾಮಾಜಿಕ, ಧಾರ್ಮಿಕ ನೀತಿಗೆ ವಿರುದ್ಧವಾದ ಹೋರಾಟವಾಗಿತ್ತು. ಆಧುನಿಕ ಇಂಗ್ಲಿಷ್ ಶಿಕ್ಷಣ, ರೈಸ್ ಮೊದಲಾದವರಿಂದಾದ ಕರ್ನಾಟಕ ಇತಿಹಾಸದ ಪರಿಶೋಧನೆ, ಆಲೂರು ವೆಂಕಟರಾವ್, ಗಳಗನಾಥ ಮೊದಲಾದ ಲೇಖಕರ ಪ್ರಭಾವಶಾಲಿ ಬರಹಗಳು ಬ್ರಿಟಿಷ್ ಆರ್ಥಿಕ ನೀತಿಯಿಂದ ಸ್ಥಳೀಯ ಜನರಿಗೆ ಉಂಟಾದ ಸಂಕಟ ಸುಧಾರಣಾ ಚಳುವಳಿಗಳು, ಬಾಲಗಂಗಾಧರ ತಿಲಕರ 'ಕೇಸರಿ' ಅಲ್ಲದೆ 'ಸ್ವದೇಶಭಿಮಾನಿ', 'ರಾಜಹಂಸ' 'ಕನ್ನಡ ಕೇಸರಿ', 'ಕರ್ನಾಟಕ ವೈಭವ' ಮುಂತಾದ ಕನ್ನಡ ವೃತ್ತ ಪತ್ರಿಕೆಗಳು ಕರ್ನಾಟಕದ ಜನತೆಯಲ್ಲಿ ಉಂಟುಮಾಡಿದ ರಾಷ್ಟ್ರೀಯ ಪ್ರಜ್ಞೆಯಿಂದಾಗಿ ಸಂಪೂರ್ಣವಾಗಿ ಸ್ವಾತಂತ್ರ್ಯ ಪ್ರೇರಣೆ ಅರಳುವುದಕ್ಕೆ ಕಾರಣವಾಯಿತು. ಮುಂಬೈ ಹಾಗೂ ಮದ್ರಾಸ್ ಪ್ರಾಂತ್ಯಗಳಿಗೆ ಸೇರಿದ್ದ ಕರ್ನಾಟಕ ಪ್ರದೇಶಗಳಲ್ಲೂ ಈ ಸ್ವಾತಂತ್ರ್ಯ ಚಳುವಳಿ ಆರಂಭಗೊಂಡಿತು. ಆಲೂರು ವೆಂಕಟರಾಯರು ಕರ್ನಾಟಕ ಏಕೀಕರಣಕ್ಕಾಗಿ ಚಳುವಳಿಯನ್ನು ಆರಂಭಿಸಿದರು. "ಕರ್ನಾಟಕ ಗತ ವೈಭವ" ಎಂಬ ಪ್ರಸಿದ್ಧ ಕೃತಿಯನ್ನು ಬರೆದು ಜನರಲ್ಲಿ ರಾಷ್ಟ್ರಪ್ರೇಮ ಉಕ್ಕೇರುವಂತೆ ಮಾಡಿದ್ದರು."[೨೮]

"ಗಾಂಧೀಜಿಯವರು ೧೯೨೭ರಲ್ಲಿ ಕರ್ನಾಟಕದಲ್ಲಿ ಪ್ರವಾಸ ಕೈಗೊಂಡರು. ಮಂಗಳೂರು, ಬೆಳಗಾಂ, ಬೆಂಗಳೂರು, ಧಾರವಾಡ, ಗದಗ, ದೊಡ್ಡಬಳ್ಳಾಪುರ ಮುಂತಾದ ಸ್ಥಳಗಳಿಗೆ ಭೇಟಿನೀಡುವ ಸಂದರ್ಭದಲ್ಲಿ ಒಮ್ಮೆ ಮಹಾತ್ಮಗಾಂಧೀಜಿ ಅಧ್ಯಕ್ಷರಾಗಿದ್ದ ಅಖಿಲ ಭಾರತ ಕಾಂಗ್ರೇಸ್ ಸಮ್ಮೇಳನವು ಬೆಳಗಾಂನಲ್ಲಿ

೨೭. ಕರ್ನಾಟಕ ರಾಜಕೀಯ ಚಿಂತನೆ, ಪ್ರಕಟಣೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೩ ಪು.೨೬೫

೨೮. ಅದೇ. ಪು. ೨೬೭

ನಡೆಯಿತು. ಆದಾದ ನಂತರದ ದಿನಗಳಲ್ಲಿ ಗಾಂಧಿ ನಂದಿಬೆಟ್ಟಕ್ಕೆ ಬಂದು ಅಲ್ಲಿ ಅನಾರೋಗ್ಯದ ಕಾರಣ ಸ್ವದಿನ ವಿಶ್ರಾಂತಿ ತೆಗೆದು ಕೊಳ್ಳುತ್ತಾರೆ."[೨೯]

ಗಾಂಧೀಜಿಯವರು ನಂದಿಬೆಟ್ಟಕ್ಕೆ ಬಂದಿರುವ ವಿಷಯವನ್ನು ತಿಳಿದು ಎನ್.ಎಸ್. ಹರ್ಡಿಕರ್ ಅವರ ಜೊತೆ ರುಮಾಲೆಯವರು ಗಾಂಧೀಜಿಯನ್ನು ಭೇಟಿ ಮಾಡಲು ಹೋಗುವರು. ಮೊದಲಿಗೆ ನಂದಿಬೆಟ್ಟದಲ್ಲಿ ರುಮಾಲೆಯವರಿಗೆ ಗಾಂಧೀಜಿಯವರ ಪರಿಚಯವಾಗುತ್ತದೆ. ಅವರ ಪರಿಚಯವಾದ ನಂತರ ಅಲ್ಲಿಂದ ರುಮಾಲೆಯವರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಲು ಇಚ್ಛಿಸುತ್ತಾರೆ. ರುಮಾಲೆಯವರು ಸ್ವಾತಂತ್ರ್ಯ ಹೋರಾಟದಲ್ಲಿ ೧೯೨೭ರಿಂದಲೇ ಗಾಂಧೀಜಿಯವರ ಜೊತೆ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುತ್ತಾರೆ. ನಂತರ ರುಮಾಲೆಗೆ ಬಿ. ಸಿದ್ದಲಿಂಗಯ್ಯನವರು ಪರಿಚಯವಾಗುತ್ತದೆ. ಅವರನ್ನು ಗಾಂಧೀಜಿಯವರ ಅತ್ತಿರ ಕರೆದುಕೊಂಡು ಹೋಗಿ ಅವರಿಗೆ ಪರಿಚಯಿಸುವರು. ನಂತರ ರುಮಾಲೆ ಇವರಿಗೆ ಗಾಂಧೀತತ್ವವನ್ನು ಭೋದಿಸುತ್ತಾರೆ. ಆದರೆ ಸಿದ್ಧಲಿಂಗಯ್ಯನವರ ತಲೆಗೆ ಹೋಗುವುದಿಲ್ಲ. ಕಾಂಗ್ರೇಸ್ ಪ್ರೆಸಿಡೆಂಟ್ ಆಗಿದ್ದ ಸಿದ್ದಲಿಂಗಯ್ಯನವರು ಒಮ್ಮೆ ಹೊರರಾಷ್ಟ್ರಕ್ಕೆ ಪ್ರವಾಸ ಕೈಗೊಂಡು ಸಿದ್ಧಲಿಂಗಯ್ಯ ಮತ್ತು ಶಾಂಪುರ ರಾಮಚಂದ್ರಪ್ಪನವರು ೧೯೩೦ರಲ್ಲಿ ಪ್ರವಾಸ ಕೈಗೊಳ್ಳುವರು. ಅಲ್ಲಿ ಕಾರಣಾಂತರದಿಂದ ಹೈಲ್ಯೆಂಡಲ್ಲಿ ಅಲ್ಲಿಯ ಪೋಲೀಸರು ಇವರನ್ನು ಬಂಧಿಸುವರು. ಅಲಿಂದ ದೂರವಾಣಿಯ ಮುಖಾಂತರ ರುಮಾಲೆಗೆ ನಮ್ಮನ್ನು ಹೈಲ್ಯೆಂಡ್ ಪೋಲೀಸರು ಬಂಧಿಸಿದ್ದಾರೆ, ದಯವಿಟ್ಟು ಏನಾದರು ಮಾಡಿ ನಮ್ಮನ್ನು ಭಾರತಕ್ಕೆ ಕರೆಸಿಕೊ ನೀನು ಹೇಳ್ತಾ ಇದ್ದೆ ಗಾಂಧೀತತ್ವ ಬೇಕು, ಹೋರಟ ಬೇಕು ಅಂತ ಆದರೆ ನಾನು ಯಾಕಯ್ಯ ಹೋರಾಟ ಮಾಡ್ತಿರಾ ಸುಮ್ಮನೆ ಗಾಂಧೀಗಾಂಧಿ ಅಂತ ಓಡಾಡುತ್ತಿರೆ ಎಂದು ಹೇಳುತ್ತಿದ್ದೆ ಸತ್ಯ ಕಣಯ್ಯ ರುಮಾಲೆ ಹೊರದೇಶದವರು ನಮ್ಮ ಮೇಲೆ ದಬ್ಬಾಳಿಕೆ ಮಾಡುತ್ತಾರೆ. ನಿನ್ನ ಮಾತು ನಾವು ಕೇಳಬೇಕಿತ್ತು. ನಾವು ಭಾರತಕ್ಕೆ ಬಂದುಬಿಡ್ತಿವಿ ದಯವಿಟ್ಟು ನಮ್ಮನ್ನು ವಾಪಸ್ ಕರೆಸಿಕೊ ಎಂದು ಕೇಳಿಕೊಳುತ್ತಾರೆ. ಆಗ ರುಮಾಲೆ ಅವರು ಆ ಸಮಯದಲ್ಲಿ ಮೈಸೂರು ಸಂಸ್ಥಾನದಲ್ಲಿ ಕಾಂಗ್ರೇಸ್ ಫ್ರೀಡಂ ಮುಮೆಂಟ್‌ನಲ್ಲಿ ಹೋರಾಟ ಮಾಡಿದ ವ್ಯಕ್ತಿ ಎಂದು ಗುರುತಿಸಿಕೊಂಡಿದ್ದರಿಂದ ರುಮಾಲೆ ಅವರು ಸರ್ ಜಾ ಇಸ್ಮಾಯಿಲ್‌ಗೆ ಹೇಳಿ ಅಲ್ಲಿಗೆ ದೂರವಾಣಿ ಸಂಪರ್ಕದಿಂದ ಅವರನ್ನು ಬಿಡುಗಡೆ ಮಾಡಿಸಿ ಭಾರತಕ್ಕೆ ಕರೆಯಿಸಿಕೊಳ್ಳುತ್ತಾರೆ. ಸಿದ್ಧಲಿಂಗಯ್ಯನವರು ಭಾರತಕ್ಕೆ ಬಂದಕೂಡಲೆ ಬೆಂಗಳೂರಿಗೆ ಬಂದು ಅಲ್ಲಿಂದ ರೈಲಿನ ಮೂಲಕ ದೊಡ್ಡಬಳ್ಳಾಪುರಕ್ಕೆ ಬಂದ ಕೂಡಲೆ ರುಮಾಲೆ ಅವರು ಸಿದ್ದಲಿಂಗಯ್ಯನವರನ್ನು ಆಹ್ವಾನಿಸುತ್ತಾರೆ. ಆಗ ಸಿದ್ಧಲಿಂಗಯ್ಯನವರು ಹೇಳುತ್ತಾರೆ. ರುಮಾಲೆ ನೀನು ಹೇಳಿದ್ದು ಸತ್ಯ ನಮಗೆ ಸ್ವಾತಂತ್ರ್ಯ ಬೇಕೆಬೇಕು. ನಾನು ಕೂಡ ಫ್ರಿಡಂ ಮುಮೆಂಟ್‌ಗೆ ಸೇರಿಕೊಳ್ಳುತ್ತೇನೆ ಎಂದು ಹೇಳಿದಾಗ ಇನ್ನು

---

೨೯. ಕರ್ನಾಟಕ ರಾಜಕೀಯ ಚಿಂತನೆ, ಪ್ರಕಟಣೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೩ ಪು. ೨೬೮

ತಡೆಮಾಡಬೇಡ ಎಂದು ಹಳಿದರು. ಆಗ ಸಿದ್ಧಲಿಂಗಯ್ಯನವರು ಎಲ್.ಎಲ್.ಬಿ. ಓದಿದ್ದರಿಂದ ಪ್ಯಾಂಟ್‌ಕೋಟ್ ಹಾಕಿಕೊಂಡಿದ್ದರು. ಅದನ್ನು ನೋಡಿ ರುಮಾಲೆಯವರು ಬಟ್ಟೆಯನ್ನು ಬಿಚ್ಚು ಅಂದರು, ಸಿದ್ಧಲಿಂಗಯ್ಯನವರು ಆಶ್ಚರ್ಯದಿಂದ ಯಾಕಪ್ಪ ಎಂದರು. ನೀವು ಸ್ವದೇಶಿ ಉಡುಪನ್ನು ಧರಿಸಿಕೊಳ್ಳಬೇಕು ಎಂದಾಗ ನಡೆ ಮನೆಗೆ ಹೋರಡೋಣ ಅಲ್ಲಿ ವಸ್ತ್ರವನ್ನು ಧರಿಸಿಕೊಳ್ಳುತ್ತೇನೆ ಅಂದರು. ಆದರೆ ಒಪ್ಪಲಿಲ್ಲಾ ಅವರು ಹಾಕಿಕೊಂಡಿರುವ ಜುಬ್ಬವನ್ನು ಮತ್ತು ಖಾದಿ ಪಂಚೆಯನ್ನು ಅಲ್ಲಿಯೇ ಬಿಚ್ಚಿಕೊಟ್ಟು ಅವರಿಗೆ ಕೊಟ್ಟು, ಬರಿ ಬನಿಯನ್ ಮತ್ತು ನಿಕ್ಕರ್‌ನಲ್ಲಿ ಅವರ ಜೊತೆ ರೈಲು ನಿಲ್ದಾಣದಿಂದ ಮನೆಗೆ ಬರುತ್ತಾರೆ. ಅಂದು ಖಾದಿಧರಿಸಿದ ಸಿದ್ಧಲಿಂಗಯ್ಯನವರು ಅವರ ಕೊನೆಗಾಲದವರೆಗೂ ಬರಿಖಾದಿ ಬಟ್ಟೆಯಲ್ಲೇ ಜೀವನ ಕಳೆದರು.

ಸಿದ್ಧಲಿಂಗಯ್ಯನವರು ಒಂದು ಕಡೆ ಹೇಳುತ್ತಾರೆ. ರುಮಾಲೆಯವರು ನನಗೆ ರಾಜಕೀಯ ಗುರು ಎಂದು. ಒಮ್ಮೆ ದೊಡ್ಡಬಳ್ಳಾಪುರದ ರುಮಾಲೆ ಚಿತ್ರದಲ್ಲಿ ಸ್ವಾತಂತ್ರ್ಯ ಹೋರಾಟದ ಒಂದು ಸಭೆಯನ್ನು ಕರೆಯುತ್ತಾರೆ. ಅಲ್ಲಿಗೆ ಗಾಂಧೀಜಿ, ಟಿ. ಸಿದ್ಧಲಿಂಗಯ್ಯ, ಎಸ್.ಎಸ್. ಹರ್ಡಿಕರ್, ರುಮಾಲೆ ಇತರೆ ಮಹಾನ್ ವ್ಯಕ್ತಿಗಳು ಸಭೆ ಸೇರುತ್ತಾರೆ. ಆ ಸಮಯದಲ್ಲಿ ಸಿದ್ಧಲಿಂಗಯ್ಯನವರು ಸರ್‌ದಾರ್ ವಲ್ಲಭಾಯಿ ಪಟೇಲ್ ಮತ್ತು ಗಾಂಧೀಜಿಯವರನ್ನು ರುಮಾಲೆ ಚನ್ನಬಸವ್ಯನವರ ಜೊತೆಯಲ್ಲೇ ಮೊದಲು ಪರಿಚಯವಾಗಿದ್ದು ಎಂದು ಹೇಳುತ್ತಾರೆ ಎಂಬ ಮಾತನ್ನು ರುಮಾಲೆ ನಾಗರಾಜು ಅವರು ಸಾಂಧರ್ಬಿಕವಾಗಿ ನುಡಿದರು. ರುಮಾಲೆಯವರು, ಎಸ್.ಎಸ್. ಹರ್ಡಿಕರ್, ನಾ. ನಂಜುಂಡಯ್ಯ, ವೀರಭದ್ರಪ್ಪ, ಸಿದ್ಧಲಿಂಗಯ್ಯ, ಗಾಂಧೀಜಿಯವರ ಜೊತೆ ಚಳುವಳಿಯಲ್ಲಿ ಭಾಗವಹಿಸಿದ ಸಂದರ್ಭದಲ್ಲಿ ಇವರುಗಳನ್ನು ಪೋಲಿಸರು ಬಂಧಿಸಿ ಜೈಲಿಗೆ ಹಾಕುತ್ತಾರೆ. ಇವರುಗಳು ರಾಜಕೀಯ ಖೈದಿಯಾಗಿ ಸೆರೆಮನೆ ವಾಸವನ್ನು ಅನುಭವಿಸುವರು. ೧೯೭೩ರಲ್ಲಿ ಉಪ್ಪಿನ ಸತ್ಯಾಗ್ರಹಕ್ಕೆ ಪ್ರವೇಶಿಸಿ, ಮುಂಬಯಿ, ಸೋಲ್ಲಾಪುರ ಮಧ್ಯಬಂಗಾಳ, ಬಾಗಲಕೋಟೆ, ಬಿಜಾಪುರಗಳಲ್ಲಿ ತಮ್ಮ ಕಾರ್ಯಚಟುವಟಿಕೆಯನ್ನು ಆರಂಭಿಸಿ ಬಿಜಾಪುರದಲ್ಲಿ ಸ್ವಲ್ಪ ಕಾಲ ಸೆರೆವಾಸವನ್ನು ಅನುಭವಿಸುತ್ತಾರೆ. ತದನಂತರ ಪುನಃ ಮೈಸೂರು ಕಾಂಗ್ರೆಸ್‌ನ ಅಣತಿಯಂತೆ ಸತ್ಯಾಗ್ರಹವನ್ನು ಮುಂದುವರೆಸಿ ೧೯೩೭ರಲ್ಲೇ ಪುನಃ ಸೆಂಟ್ರಲ್ ಜೈಲಿನಲ್ಲಿ ಶಿಕ್ಷೆಗೆ ಒಳಗಾಗುವರು. ಹೀಗೆ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಹತ್ತು ಹಲವು ಬಾರಿ ಜೈಲು ಶಿಕ್ಷೆಯನ್ನು ಅನುಭವಿಸಿದ್ದಾರೆ.

**ಸೇವಾದಳದಲ್ಲಿ ರುಮಾಲೆ**

ರುಮಾಲೆಯವರು ಸ್ವಾತಂತ್ರ್ಯದ ನಂತರ ಯುವಕ ಚಳುವಳಿಯನ್ನು ಆಯ್ದುಕೊಂಡು ೧೯೪೭ ರಿಂದ ೧೯೫೭ರವರೆಗೆ ಟಿ. ಸಿದ್ಧಲಿಂಗಯ್ಯ, ಕೆ. ರಂಗಯ್ಯಂಗಾರ್, ಎ.ಜೆ. ರಾಮಚಂದ್ರರಾವ್, ಕೆಂಗಲ್ ಹನುಮಂತಯ್ಯನವರೊಂದಿಗೆ ಕೂಡಿ ಸೇವಾದಳ ಸಂಘಟನಾ ಕಾರ್ಯವನ್ನು ಮಾಡಿ ಎಸ್.ಎಸ್.

ಹರ್ಡಿಕರ್‌ರವರೊಂದಿಗೆ ಕರ್ನಾಟಕದಲ್ಲಿ ಸೇವಾದಳವನ್ನು ಭಾರತ ಸೇವಾದಳವನ್ನಾಗಿಸಿ ಯುವಜನ ಸಂಸ್ಥೆಯನ್ನಾಗಿಸಿದರು. ಇಲ್ಲಿ ಅವರು ಪಟ್ಟ ಶ್ರಮ ವರ್ಣಾತೀತವಾದದ್ದು. ಇವರ ಸೇವಾಶಕ್ತಿಯನ್ನು ಕಂಡು ಆಗಿನ ಸರ್ಕಾರ ರುಮಾಲೆಯವರನ್ನು ವಿಧಾನ ಪರಿಷತ್ತಿಗೆ ನಾಮಕರಣ ಮಾಡಿ ಸದಸ್ಯರನ್ನಾಗಿ ನೇಮಕ ಮಾಡಿತು. ರುಮಾಲೆ ಅವರು ಶ್ರಾವಣಬೆಳಗೊಳದ ಮಹಾಭೀಷೇಕದ ಕಾಲದಲ್ಲಿ ಸಾರ್ಕರಿ ಅಧಿಕಾರಿಗೆ ಸವಾಲು ಆಗಿ ನೈರ್ಮಲ್ಯ ಕಾರ್ಯವನ್ನು ತೆಗೆದುಕೊಳ್ಳುವ ನಿರ್ಧಾರವು ಲಕ್ಷೋಪ ಲಕ್ಷ ಜನ ಯಾತ್ರಿಕರ ಆರೋಗ್ಯ ಸಂರಕ್ಷಣಾ ಕಾರ್ಯದಿಂದ ವಿಪುಲ ಪ್ರಶಂಸೆಗೆ ಪಾತ್ರವಾಗಿ ಇಂದಿಗೂ ಸೇವಾದಳವು ಆ ಕಾರ್ಯವನ್ನು ಮಹಾ ಮಸ್ತಾಭಿಷೇಕಕ್ಕೆ ಅನುಸರಿಸಿಕೊಂಡು ಬರುತ್ತಿದೆ. ಇವರು ಜನತೆಯ ಸೇವೆಗೆ ಇದೊಂದು ದೊಡ್ಡ ನಿದರ್ಶನ. ಇದು ಜನತೆಯ ಸೇವೆಗೆ ಇದೊಂದು ದೊಡ್ಡ ಕುರುಹು.

ಸೇವಾದಳದ ಪ್ರಚಾರಕ್ಕಾಗಿ ಪಕ್ಷ ಪತ್ರಿಕೆಯನ್ನು ಆರಂಭಿಸಿ ಮೊದಲು ಸಂಪಾದಕರಾಗಿದ್ದುದು ಆ ಪತ್ರಿಕೆಯು ಇಂದೂ ನಡೆಸಿಕೊಂಡು ಬರುತ್ತಿದ್ದು. ಅವರ ಸಂಘಟನೆಯಲ್ಲಿ ಇಂತಹ ವ್ಯಕ್ತಿಯನ್ನು ಬಲಪಡಿಸಿದೆ. ಮತ್ತು ಇವರಿಂದ ಕಾಂಪೋಸ್ಟ್ ಚಳುವಳಿ ಆರಂಭವಾಗಿ ಗ್ರಾಮಂತರದಲ್ಲಿ ಸೇವಾದಳವು ಸ್ಥಿರವಾಗಲು ನಾಂದಿ ಎನ್ನಬಹುದು. ರುಮಾಲೆಯವರು ಅಂತ್ಯದಲ್ಲಿ ಭಾರತ ಸೇವಾದಳದ ಪುರೋಭಿವೃದ್ಧಿಗೆ ಮನಸ್ಸುವಾಲಿತ್ತು. ಇದಕ್ಕಾಗಿಯೇ ಕಾರ್ಯಕರ್ತರನ್ನು ಭೇಟಿ ಮಾಡಿ ಪ್ರಗತಿಯ ಕಾರ್ಯವನ್ನು ವೀಕ್ಷಿಸುತ್ತಿದ್ದರು. ರುಮಾಲೆಯವರು ತಮ್ಮ ಚಿರಸ್ಮರಣೆಯನ್ನು ನಿಲ್ಲಿಸಲು ಮಾಡಿದ ಮಹಾಕಾರ್ಯವೆಂದರೆ ಸೇವಾದಳದ ಕೇಂದ್ರಕಛೇರಿಯ ನಿವೇಶನ ಹಾಗೂ ಕಟ್ಟಡ ಅವರ ಹೆಗ್ಗುರುತು.

"ಎಸ್.ಎಂ. ಕೃಷ್ಣರವರು ಮುಖ್ಯಮಂತ್ರಿಗಳಾಗಿದ್ದಾಗ ಅವರ ಕಾಲದಲ್ಲಿ ಸೇವಾದಳ ಕಾರ್ಯ ಕ್ರಮವೊಂದರ ಭಾಷಣ ಸಂದರ್ಭದಲ್ಲಿ ಹಳೆಯ ಕಾಲದ ಸೇವಾದಳಕ್ಕೂ ಈಗಿನ ಕಾಲದ ಸೇವಾದಳಕ್ಕೂ ತುಂಬಾ ವ್ಯತ್ಯಾಸವಿದೆ. ನಾವೆಲ್ಲರು ರುಮಾಲೆ ಚನ್ನಬಸವಯ್ಯನವರ ಮಾರ್ಗದರ್ಶನದಲ್ಲಿ ಕೆಲಸ ಮಾಡಿರುವಂತವರು ರುಮಾಲೆ ಚನ್ನಬಸವಯ್ಯನವರ ಮಟ್ಟಕ್ಕೆ ಸೇವಾದಳದಲ್ಲಿ ಕೆಲಸ ಮಾಡಿರುವಂಥವರು ಮತ್ತೊಬ್ಬರಿಲ್ಲಾ ರುಮಾಲೆ ಅವರು ಸೇವಾದಳವನ್ನು ಉನ್ನತ ಮಟ್ಟಕ್ಕೆ ಕಟ್ಟಿ ಬೆಳೆಸಿದ ಧೀಮಂತ ವ್ಯಕ್ತಿ."[೩೦] ಎಂದು ಹೇಳುತ್ತಾರೆ.

**ಸೇವಾದಳದಲ್ಲಿ ಮಾಡಿದ ಮಹಾಸಾಧನೆ**

೧. ಪಕ್ಷಪಾತ, ಜಾತ್ಯಾತೀತ ಸಂಸ್ಥೆಯನ್ನಾಗಿ 'ಭಾರತ ಸೇವಾದಳ' ಎಂಬ ಯುವಜನ ಸಂಸ್ಥೆಯ ಉದಯವಾಗಲು ಶ್ರಮಿಸಿದ್ದು.

---

೩೦. ರುಮಾಲೆ ನಾಗರಾಜು (ರುಮಾಲೆ ಚನ್ನಬಸವಯ್ಯ ತಮ್ಮನ ಮಗ) ಸಂದರ್ಶನ, ಆಗಸ್ಟ್, ೨೦೦೮

೨. ಸರ್ಕಾರದಲ್ಲಿ ಅನುದಾನ ಬರುವಂತೆ ಮಾಡಿದುದು.

೩. ಪ್ರೌಢಶಾಲೆ, ಮಾಧ್ಯಮಿಕ ಶಾಲೆಗಳಲ್ಲಿ ಸೇವಾದಳದ ಶಿಕ್ಷಣವನ್ನು ಕಡ್ಡಾಯ ಮಾಡುವಂತೆ ಸರ್ಕಾರವನ್ನು ಒತ್ತಾಯಿಸಿದ್ದು.

೪. ಸೇವಾದಳದ ಕಟ್ಟಡ ನಿವೇಶವನ್ನು ಪಡೆದದ್ದು.

೫. ಸರ್.ಎಂ. ವಿಶ್ವೇಶ್ವರಯ್ಯ ಯೋಜನೆಯಲ್ಲಿ ಸೇವಾದಳದ ಶಿಕ್ಷಣವನ್ನು ತಂದದ್ದು.

೬. ವಿದ್ಯಾ ಸುಧಾರಣಾ ಸಮಿತಿಯಲ್ಲಿ ಸೇವಾದಳ ಶಿಕ್ಷಣ ಕ್ರಮವನ್ನು ಅಳವಡಿಸಲು ಪ್ರಯತ್ನ ಮಾಡಿದ್ದು.

೭. ಸೇವಾದಳಕ್ಕಾಗಿಯೆ ಒಂದು ತರಬೇತಿ ಕೇಂದ್ರವನ್ನು ಸರ್ಕಾರದಿಂದ ಪಡೆದದ್ದು.

೮. ಕಾಂಪೋಸ್ಟ್ ಪ್ರಚಾರ ಹಾಗೂ ಶ್ರಮದಾನ, ಸೇವಾಶಿಬಿರ ಇವುಗಳನ್ನು ಜಾರಿಗೊಳಿಸಿದ್ದು.

೯. ಗಣರಾಜ್ಯ ಫೆರೇಡ್ ಮೈಸೂರಿನ ದಸರಾ ಮತ್ತು ವಸ್ತುಪ್ರದರ್ಶನದಲ್ಲಿ ಸೇವೆ, ಸೇವಾದಳದ ತುಕಡಿಗಳು ಭಾಗವಹಿಸುವಂತೆ ಮಾಡಿದ್ದು.

೧೦. ಶಾಲೆಗಳಲ್ಲಿ ಕೇಂದ್ರ ನಾಯಕ ಶಿಕ್ಷಣ ಪಡೆದ ಕಾರ್ಯಕರ್ತರನ್ನು ವ್ಯಾಯಾಮ ಶಿಕ್ಷಕರನ್ನಾಗಿ ನೇಮಕ ಮಾಡಲು ಸರ್ಕಾರಿ ಹುಕ್ಕುಂನ್ನು ಹೊರತಂದರು.

ಇಷ್ಟೇ ಅಲ್ಲದೇ ರಾಜಕೀಯ ಕ್ಷೇತದ್ರದಲ್ಲಿ ಮೂರು ಬಾರಿ ಎಂ.ಎಲ್.ಸಿ. ಆಗಿದ್ದರು. ನಿಜಲಿಂಗಪ್ಪನವರು ಮತ್ತು ದೇವರಾಜ ಅರಸು ನೀನು ದೇಶಸೇವೆ ಮಾಡಿದ್ದೀಯ ನಿಮ್ಮನ್ನು ಗುರುತಿಸಲೆಬೇಕೆಂದು ಇವರನ್ನು ಎಂ.ಎಲ್.ಸಿ. ಮಾಡುತ್ತಾರೆ. ೧೯೫೨-೬೦ ರವರೆಗೆ ಮೈಸೂರು ರಾಜ್ಯದ ಶಾಸಕರ ಸಮಿತಿಯ ಸದಸ್ಯರಾಗುತ್ತಾರೆ. ಇದರಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನವನ್ನು ಸರ್ಕಾರ ಕೊಟ್ಟರೆ ಅದನ್ನು ಕಡುಬಡವರಿಗೆ ದಾನ ಮಾಡುತ್ತಿದ್ದರು. ಮತ್ತು ಸೇವಾದಳದ ನಿವೃತಿ ವೇತನವನ್ನು ನನಗೆ ಬೇಡ ಅದೇ ಹಣವನ್ನು ಬಡ ಜನರಿಗೆ ನೀಡಿ ಎಂದು ಹೇಳುತ್ತಿದ್ದರು. ಮೈಸೂರು ರಾಜ್ಯದ ಶಾಸಕರ ಸಮಿತಿ ಸದಸ್ಯತ್ವದಲ್ಲಿದ್ದಾಗಲೇ. ೧೯೫೬-೬೦ರ ತನಕ ತಾಯಿನಾಡು ದಿನಪತ್ರಿಕೆಯ ಸಂಪಾಕರಾಗಿ ನಾಡಿನ ಭಾಷೆ, ನೆಲ, ಜಲ, ಸಂಸ್ಕೃತಿ, ಕಲೆಯನ್ನು ಉಳಿಸಿಬೆಳೆಸಲು ನಿರಂತರವಾಗಿ ಶ್ರಮಿಸಿದ್ದಾರೆ. ಹೀಗೆ ಹಲವಾರು ಕ್ಷೇತ್ರಗಳಲ್ಲಿ ಯಾರೂ ಮಾಡದಂತಹ ಒಂದು ಅದ್ಭುತ ಸಾಧನೆಯನ್ನು ರುಮಾಲೆ ಚನ್ನಬಸವಯ್ಯನವರು ಮಾಡಿರುವುದು ಒಂದು ದೊಡ್ಡ ಆಶ್ಚರ್ಯಕರ ಸಂಗತಿ.

## ಅಧ್ಯಾಯ ನಾಲ್ಕು

## ರುಮಾಲೆ ಅವರ ಕಲಾಕೃತಿಗಳ ಹರವು ಮತ್ತು ವಸ್ತುವಿಷಯ

---

"ಕಲಾವಿದನ ಮನಸ್ಸಿನಲ್ಲಿ ಅಮೂರ್ತ ಭಾವನೆ, ಕಲ್ಪನೆ, ಪ್ರತಿಬಿಂಬ, ನೆನಪು ಮುಂತಾದವುಗಳಿಂದ ಕೂಡಿದ ತುಮಲಗಳು ಉದ್ಭವಿಸಿ ಮೂರ್ತರೂಪ ಆಕಾರಗಳನ್ನು ಪಡೆದು ಕಲಾಕೃತಿ ಸೃಷ್ಟಿಯಾಗುತ್ತದೆ. ಪ್ರತಿಯೊಂದು ಕಲಾಕೃತಿಯೂ ಅನನ್ಯವಾದದ್ದೇ ಅದರ ವಸ್ತುವಿಷಯ ಯಾವುದೇ ಇದ್ದರೂ ಅದಕ್ಕೆ ಕಲಾವಿದರು ತನ್ನ ಮನೋಗತ ಭಾವನೆಗಳನ್ನು ಬೀಜಗೊಳಿಸಿ, ಬಿತ್ತಿ, ಬೆಳಸಿ, ಪೋಷಿಸಿ ದೃಶ್ಯರೂಪ ನೀಡುತ್ತಾನೆ. ಕಲಾವಿದನ ಭಾವಾಭಿವ್ಯಕ್ತಿಯ ನಿಖರತೆಯನ್ನು ಕಲಾಕೃತಿಗಳ ಮೂಲಕ ಮಾತ್ರವೇ ಅಳೆಯಲು ಸಾಧ್ಯ. ಕಲಾವಿದನು ತನ್ನ ಅಂತರಂಗವನ್ನು ದೃಶ್ಯಾತ್ಮಕ ರೂಪದಲ್ಲಿ ಅಭಿವ್ಯಕ್ತಿಸುವಂತಹ ಸಂದರ್ಭದಲ್ಲಿ ಆ ಕಲಾಕೃತಿಗಳು ಅವನ ಮನಸ್ಸಿನ ಭಾವನೆಗಳ ಪ್ರತಿಬಿಂಬವಾಗುತ್ತವೆ. ವಿಭಿನ್ನ ನೆಲೆಯಲ್ಲಿ ಭಾವಾಭಿವ್ಯಕ್ತಿಯ ಮೂಸೆಯಲ್ಲಿ ಅರಳಿದ ಕಲಾಕೃತಿಗಳ ವಿಸ್ತಾರವಾದ ಅಧ್ಯಯನವಾದಾಗ ಮಾತ್ರ ಕಲಾವಿದನ ಕಲಾಸೃಷ್ಟಿಯು ಹೊರಪ್ರಪಂಚಕ್ಕೆ ತೆರೆದುಕೊಳ್ಳುತ್ತದೆ."[೧] ಹಾಗಾಗಿ ಬಣ್ಣಗಳ ಒಡನಾಟ, ಕುಂಚಗಳ ಬಿರುಸಿನ ಸೆಳೆತ ಇವುಗಳ ಬೇರುಗಳಲ್ಲಿ ಮೂಡಿದ ಕಲಾವಿದನ ಆಶಯವನ್ನರಿಯಲು ಅಧ್ಯಯನ ಅತ್ಯವಶ್ಯ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯದಲ್ಲಿ ರುಮಾಲೆಯವರ ಚಿತ್ರ ಕೃತಿಗಳನ್ನು ಈ ಕೆಳಗಿನಂತೆ ವಿಂಗಡಿಸಿ ಅಧ್ಯಯನಕ್ಕೊಳಪಡಿಸಲಾಗಿದೆ.

---

೧. ಚಿತ್ರಕಲಾವಿದ ಡಿ.ವಿ. ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು, ಎಂ.ಫಿಲ್ ಪ್ರಬಂಧ, ೨೦೦೫ ಪು. ೬೧



ಜಲಸ್ಕಂದನ ವಿದ್ಯೆಯಲ್ಲಿ ಶಿವಬಾಲಯೋಗಿಸ್ವಾಮಿ



ಸಂಜಯ್ ಕಬೆಯವರ ಭಾವ ಚಿತ್ರ

ಜಲವರ್ಣ



ಲಾಲ್‌ಬಾಗ್ ಒಳಬಾಗದ ಒಂದು ದೃಶ್ಯ



ಚರ್ಚ್‌ವೊಂದರ ಚಿತ್ರ



ಕಾಲೇಜ್ ಆವರಣದಲ್ಲಿ ಅರಳಿರುವ ಹೂವುಗಳು



ಅಲಂಕಾರ್ ಚಿತ್ರ ಮಂದಿರದ ಒಂದು ಬದಿ



ಕಬ್ಬನ್ ಪಾರ್ಕನಲ್ಲಿ ಹಳದಿ ಹೂವಿನ ಮರ




ಯೇತ ನೀರಾವರಿಯ ತೋಟದ ದೃಶ್ಯ

ಜಲವರ್ಣ




ಮದ್ರಾಸ್ ರೈಲು ನಿಲ್ದಾಣ



ಆಲ್ ಮಟ್ಟಿ ಡ್ಯಾಮ್



ಲಾಲ್‌ಬಾಗ್‌ನ ಕಾರಂಜಿ



ಕಾರ್ಖಾನೆಯ ಬದಿಯಲ್ಲಿರುವ ಗುಡಿಸಿಲುಗಳು



ಪ್ರಕೃತಿಯ ಮಡಿಲಲ್ಲಿ ಮಂಟಪದ ದೃಶ್ಯ

ಜಲವರ್ಣ



ಬಂಡೀಪುರದ ಕೆರೆಯ ಚಿತ್ರ



ಬಂಡೀಪುರದ ಕೆರೆಯಲ್ಲಿನ ಪ್ರತಿಬಿಂಬ



ಕಬ್ಬನ್ ಪಾರ್ಕನ ಬಣ್ಣ ಬಣ್ಣದ ಹೂವುಗಳು ಜಲವರ್ಣ



ಪ್ರಕೃತಿಯ ಒಂದು ನೋಟ



ನೀರಿನಲ್ಲಿ ಮರದ ಪ್ರತಿಬಿಂಬ–ಹಂಪಿ



ಪ್ರಕೃತಿಯ ಒಂದು ನೋಟ

ಜಲವರ್ಣ



ಬೆಂಗಳೂರು ರಸ್ತೆಯ ಬದಿ



ಪ್ರಕೃತಿಯ ದೃಶ್ಯ



ರಾಜಾಜಿನಗರದ ಮನೆಯ ಒಂದು ನೋಟ

ಜಲವರ್ಣ



ರಾಜಭವನ ಹತ್ತಿರ ಗೊಲ್ಮೊಹರ್ ಚಿತ್ರ



ಹೈಕೋರ್ಟ್ ಹತ್ತಿರ ಹಳದಿ ಹೂವಿನ ಮರ



ಪ್ರಕೃತಿಯ ಒಂದು ನೋಟ ಜಲವರ್ಣ



ತುಳಜಾ ಭವಾನಿ



ಲಿಂಗವನ್ನು ಸುತ್ತುವರೆದ ಸರ್ಪ



ಲಿಂಗಕ್ಕೆ ರಕ್ಷಣೆಕೊಡುವ ಸರ್ಪ



ಗೊಕರ್ಣದ ಲಿಂಗ

ಜಲವರ್ಣ



ಬ್ರಹ್ಮಕಮಲ



ಕಬ್ಬನ್ ಪಾರ್ಕನ ಕೊನೆಯ ಚಿತ್ರ



ಶ್ರೀಲಂಕಾದ ಒಂದು ನೋಟ



ಶ್ರೀಲಂಕಾ ಬೀಚ್

ಜಲವರ್ಣ

**ಕಲಾಕೃತಿಗಳ ವರ್ಗೀಕರಣ**

**ವರ್ಣಚಿತ್ರಗಳು**

I. ಜಲವರ್ಣ ಚಿತ್ರಗಳು

II. ತೈಲವರ್ಣ ಚಿತ್ರಗಳು

**I. ಜಲವರ್ಣ ಚಿತ್ರಗಳು**

೧. ಭಾವಚಿತ್ರಗಳು

೨. ಪ್ರಕೃತಿ ಚಿತ್ರಗಳು

**II. ತೈಲವರ್ಣ ಚಿತ್ರಗಳು**

೧. ಭಾವಚಿತ್ರಗಳು

೨. ಪ್ರಕೃತಿಯ ಚಿತ್ರಗಳು

**ವರ್ಣಚಿತ್ರಗಳು**

ಕಲಾವಿದನು ನಿರ್ಮಿಸಿದ ಕಲಾಕೃತಿಯ ಆಕಾರ, ವರ್ಣ, ಎತ್ತರ, ಅಗಲ, ಆಳ, ಬೇರೆ-ಬೇರೆಯಾಗಿದ್ದರೂ ಎಲ್ಲದರಲ್ಲೂ ರೇಖೆ ಮತ್ತು ವರ್ಣಗಳೇ ಆಟವಾಡುತ್ತವೆ. ಆದರೂ "ಕಲಾಕೃತಿಯೊಂದು ತನ್ನ ಇನ್ನಿತರ ಅಂಶಗಳಿಗಿಂತಲೂ ವರ್ಣಸಂಯೋಜನೆಯ ತೀವ್ರತೆಯಿಂದ ನೋಡುಗನ ಪ್ರಜ್ಞೆಯನ್ನು ಕ್ಷಣಾರ್ಧದಲ್ಲಿ ಪ್ರಭಾವಿಸಬಲ್ಲದು. ನಮ್ಮ ಪಂಚೇಂದ್ರಿಯಗಳಲ್ಲಿ ಕಣ್ಣು ಅತ್ಯಂತ ಸಂವೇದನಾಶೀಲತೆಯನ್ನು ಹೊಂದಿದೆ. ಕಲಾವಿದನೊಬ್ಬ ತನ್ನ ಅಭಿವ್ಯಕ್ತಿಗೆ ಆರಿಸಿಕೊಳ್ಳುವ ಬಣ್ಣಗಳ ಛಾಯೆಗಳು ಅವನು ನೋಡುವ ಕಣ್ಣಿನ ಅನುಭವ-ಅಭ್ಯಾಸ ಮನಸ್ಸಿನ ಪಕ್ವತೆ ಭಾವನೆಗಳ ತೀವ್ರತೆಯನ್ನು ಅವಲಂಬಿಸಿರುತ್ತದೆ."[೨] ಎಂಬ ಮಾತು ರುಮಾಲೆಯವರಿಗೆ ತುಂಬಾ ಅನ್ವಯಿಸುತ್ತದೆ.

ವರ್ಣಗಳು ತಮ್ಮದೇ ಆದ ಸಾಂಕೇತಿಕ ಅರ್ಥವನ್ನು ಹೊಂದಿವೆ. ಒಂದೊಂದು ಬಣ್ಣವು ಒಂದೊಂದು ರೀತಿಯ ಭಾವೋದ್ವೇಗವನ್ನು ಮನಸ್ಸಿನಲ್ಲಿ ಮೂಡಿಸುತ್ತವೆ. ಅಂತೆಯೇ ಚಿತ್ರಗಳಲ್ಲಿ "ಬಣ್ಣ, ಆಕಾರಗಳು ಆ ಸೃಷ್ಟಿಯ ಅತ್ಯುತ್ಕೃಷ್ಟವಾದ ಅಂಶಗಳು, ಬಣ್ಣಗಳ ವಿವಿಧ ಛಾಯಾಮಾಲೆ ಕಲಾವಿದನ ವಿವಿಧ ಭಾವೋದ್ರೇಕಗಳೊಂದಿಗೆ ಹೊಂದಿಕೊಳ್ಳಬಲ್ಲವು. ಕೆಂಪು ಆಕ್ರೋಶಕ್ಕೆ, ಹಳದಿ ಸಂತೋಷಕ್ಕೆ, ನೀಲಿ ಹಾತೊರೆಯುವಿಕೆಗೆ, ಕೇಸರಿ ತ್ಯಾಗಕ್ಕೆ, ಹರಿಸು ಸಮೃದ್ಧಿಗೆ ಹೀಗೆ ಕಲಾವಿದನು ತನ್ನ ಕಲಾಕೃತಿಯಲ್ಲಿ ವರ್ಣಸಂಯೋಜನೆಯನ್ನು ಅಳ, ಪ್ರಕಾರತೆ ಹಾಗೂ ನೆರಳು, ಬೆಳಕುಗಳ ವಿನ್ಯಾಸಕ್ಕನುಸಾರವಾಗಿ ತನ್ನ ಭಾವನೆಗಳ ಅಭಿವ್ಯಕ್ತಿಯ ಹಿನ್ನೆಲೆಯಲ್ಲಿ ದುಡಿಸಿಕೊಳ್ಳುತ್ತಾನೆ."[೩]

ವರ್ಣಚಿತ್ರಗಳನ್ನು ಅವುಗಳ ರಚನೆಗಳಿಗಾಗಿ ಬಳಸಿದ ವರ್ಣಮಾಧ್ಯಮದ ಮೇಲಿಂದ ಜಲವರ್ಣ, ತೈಲವರ್ಣ ಈ ಎರಡು ವಿಧಗಳಲ್ಲಿ ವರ್ಗೀಕರಿಸಲಾಗಿದೆ. ಅವುಗಳ ವಿಷಯದ ಮೇಲೆ ಅವುಗಳನ್ನು ಮತ್ತೇ ವರ್ಗೀಕರಿಸಬಹುದು.

---

೨. ಪಿ.ಆರ್. ತಿಪ್ಪೇಸ್ವಾಮಿ ಸಂ, ಚಿತ್ರಕಲಾ ಪ್ರಪಂಚ, ಪು. ೫೬೧

೩. ಅದೇ. ಪು. ೫೬೨

ರುಮಾಲೆಯವರು ಬಣ್ಣಗಳನ್ನು ತಮ್ಮ ಚಿತ್ರಗಳಲ್ಲಿ ಕೆಲವೊಮ್ಮೆ ಸಾಂಕೇತಿಕವಾಗಿ ಇನ್ನು ಕೆಲವು ಸಾರಿ ಸಂಯೋಜನೆಗನುಗುಣವಾಗಿ ಬಳಸಿಕೊಂಡಿದ್ದಾರೆ. ಜಲವರ್ಣ, ತೈಲವರ್ಣಗಳಿಂದ ಕಲಾಕೃತಿಗಳನ್ನು ರಚನೆ ಮಾಡಿದ್ದಾರೆ. ಬಹುಶಃ ಅವರ ಕಾಲಕ್ಕೆ ಇನ್ನು ಅಕ್ರೆಲಿಕ್ ಪೆಸ್ಟಲ್ ಮಾಧ್ಯಮಗಳು ಅಷ್ಟೊಂದು ಪ್ರಚಲಿತದಲ್ಲಿಲ್ಲದೇ ಇರುವುದರಿಂದ ಇವರು ಆ ಮಾಧ್ಯಮದಲ್ಲಿ ಕಲಾಕೃತಿಗಳನ್ನು ರಚಿಸಲಿಲ್ಲವೆಂದು ಕಾಣುತ್ತದೆ. ಅಥವಾ ಆ ಮಾಧ್ಯಮದ ಬಗ್ಗೆ ಇವರಿಗೆ ಆಸಕ್ತಿ ಇರದೆಯೂ ಇರಬಹುದು.

ಒಂದು ಕಲಾಕೃತಿಯ ರಸಗ್ರಹಣ ಸಹೃದಯನಿಗೆ ತಲುಪಬೇಕಾದರೆ ಕಲಾಕೃತಿಯಲ್ಲಿ ರೇಖೆ, ವರ್ಣ ಮತ್ತು ಅವಕಾಶ(Space)ದ ಮೇಲೆ ಇರುತ್ತದೆ. ಚಿತ್ರಕಲೆಯಲ್ಲಿ ಈ ಆಯ್ಕೆಗೆ ಅವಕಾಶವಿರುವುದಿಲ್ಲ. ಆದರೆ ವರ್ಣಸಂಯೋಜನೆ, ರೇಖೆಗಳ ಲಯಾತ್ಮಕ, ರಂಗಗಳ ಘನತ್ವ ಮತ್ತು ತೆಳುತನ ಕುಂಚಗಳ ಹರಿದಾಟ ಮತ್ತು ಒತ್ತು ಇಂಥ ವಿವಿಧ ಕಾರಣಗಳಿಂದ ಒಂದು ರೀತಿಯಲ್ಲಿ ಅದ್ಭುತ ಆಕರ್ಷಕತೆ ಮತ್ತು ಅರ್ಥವಂತಿಕೆ ತರಲು ಸಾಧ್ಯವಾಗುತ್ತದೆ. ಹೀಗಾದಲ್ಲಿ ಕಲಾಕೃತಿ ಅತ್ಯಂತ ಪ್ರಾಮುಖ್ಯತೆಯನ್ನು ಪಡೆದು ಅವರಲ್ಲಿನ ಸಂವಹನ ಶಕ್ತಿ ಪ್ರಭಾವಶಾಲಿಯಾಗಿರುತ್ತದೆ. ಇಲ್ಲಿ ಚಿತ್ರಗಳ ಪ್ರಕ್ರಿಯೆ ಸರಳವಾಗುತ್ತದೆ. ಇಂತಹ ಸಂಯೋಜನೆಯ ಅಂಶಗಳನ್ನು ರುಮಾಲೆ ಚನ್ನಬಸವಯ್ಯನವರ ಕಲಾಕೃತಿಗಳಲ್ಲಿ ಕಾಣುತ್ತೇವೆ.

**I. ಜಲವರ್ಣ ಮಾಧ್ಯಮದ ವರ್ಣಚಿತ್ರಗಳು**

"ಜಲವರ್ಣ ಚಿತ್ರಗಳನ್ನು ಸಾಮಾನ್ಯವಾಗಿ ಕಾಗದಗಳ ಮೆಲೆ ಕೆಲವು ವೇಳೆ ರೇಷ್ಮೆ ಬಟ್ಟೆ, ಹಸ್ತಿದಂತ ಇಲ್ಲವೇ ಎಲುಬುಗಳ ಮೇಲೆ ಚಿತ್ರಿಸುತ್ತಾರೆ. ಬಣ್ಣಗಳನ್ನು ನೀರಿನಲ್ಲಿ ಮಿಶ್ರಣ ಮಾಡಿ ಚಿತ್ರಗಳನ್ನು ಚಿತ್ರಿಸುವುದೇ ಜಲವರ್ಣ ವಿಧಾನ. ಬಹುದಿನಗಳಿಂದಲೂ ರೇಖಾಚಿತ್ರಗಳಿಗೆ ಜಲವರ್ಣಗಳಿಂದ ಮುಕ್ತಾಯ ಸ್ಪರ್ಶಗಳನ್ನು ಕೊಡಲಾಗುತ್ತಿತ್ತೆಂಬುದನ್ನು ಲಿಯೋನಾರ್ಡೋಡಾವಿನ್ಸಿ ಮತ್ತು ಡ್ಯೂರರ್ ಅವರ ಅಸಂಖ್ಯಾತ ರೇಖಾಚಿತ್ರಗಳಿಂದ ತಿಳಿಯಬಹುದಾಗಿದೆ. ಮೊದಲಿನಿಂದ ಈಗಿನವರೆಗೂ ಈ ಜಲವರ್ಣವನ್ನೇ ಅತ್ಯಂತ ಪರಿಣಾಮಕಾರಿಯಾಗಿ ಕಲಾವಿದರು ದುಡಿಸಿಕೊಂಡಿದ್ದಾರೆ."[೪] "ಚಿಕ್ಕಣೆ ಚಿತ್ರಕಲಾ ಪ್ರಕಾರದಿಂದ ಬಳಕೆಯಲ್ಲಿದ್ದು ಉಸಿರು ಹಿಡಿದು ಬದುಕುವ ಹೋರಾಟ ನೆಡೆಸಿದ್ದ ಈ ಮಾಧ್ಯಮ ೧೭ ಮತ್ತು ೧೮ನೆಯ ಶತಮಾನದ ಆರಂಭದಲ್ಲಿ ಇಂಗ್ಲೇಂಡಿನ ಕಲಾವಿದರು ಮುಖ್ಯವಾಗಿ ಟರ್ಕರ್‌ರಂಥ ಕಲಾವಿದರು ಇಂದು ನಾವು ತಿಳಿದಿರುವ ರೀತಿಯಲ್ಲಿ ಜಲವರ್ಣಗಳನ್ನು ಬಳಸಿಕೊಂಡರು."[೫]

ಜಲವರ್ಣದಲ್ಲೇ ಇನ್ನೊಂದು ವಿಧಾನ ಒಪೆಕ್ ಇಲ್ಲಿ ಪಾರದರ್ಶಕತೆ ಇರುವುದಿಲ್ಲ. ಆದ್ದರಿಂದ ಇಲ್ಲಿ ಬಿಳಿಯ ಬಣ್ಣವನ್ನು ಇತರ ಬಣ್ಣಗಳೊಂದಿಗೆ ಮಿಶ್ರಣ ಮಾಡಬೇಕಾಗುತ್ತದೆ. "ಮಧ್ಯಕಾಲೀನ

೪. ಪಿ.ಆರ್. ತಿಪ್ಪೇಸ್ವಾಮಿ ಸಂ, ಚಿತ್ರಕಲಾ ಪ್ರಪಂಚ, ಪು. ೧೬೧

೫. ಅದೇ ಪು. ೧೬೯

ಯುಗಾಂತ್ಯದಲ್ಲಿ ಮತ್ತು ೧೩ನೆಯ ಹಾಗೂ ೧೪ನೆಯ ಶತಮಾನಗಳ ಪಾಥಿಕ್ ಸೃಷ್ಟಿಯಲ್ಲಿಯೇ ಅಲ್ಲದೆ, ಪರ್ಷಿಯನ್ ಮತ್ತು ನಮ್ಮ ದೇಶದ ಚಿಕ್ಕಣಿ ಚಿತ್ರಗಳಲ್ಲಿ ಇದನ್ನು ದುಡಿಸಿಕೊಳ್ಳಲಾಗಿದೆ."[೬] ಇಂದಿಗೂ ಇದು ಬಳಕೆಯಲ್ಲಿದೆ. ಹೀಗೆ ಈ ಎರಡು ಪ್ರಕಾರದ ಜಲವರ್ಣದ ಚಿತ್ರಗಳನ್ನು ರುಮಾಲೆ ಚನ್ನಬಸವಯ್ಯನವರು ರಚಿಸಿರುವುದು ಕಂಡುಬರುತ್ತದೆ. ಇದು ಅತ್ಯಂತ ಉತ್ತಮವಾದ ಮಾಧ್ಯಮವಾಗಿದೆಯಲ್ಲದೇ ಅಷ್ಟೇ ಕಠಿಣವಾದ ಮಾಧ್ಯವಾಗಿದೆ. "ಭಾರತದಲ್ಲಿ ಮೊದಲಿನಿಂದಲೂ ಜಲವರ್ಣಕ್ಕೆ ಹೆಚ್ಚಿನ ಪ್ರಾಧಾನ್ಯತೆ ನೀಡಲಾಗಿದೆ. ಗುಹಾಚಿತ್ರಗಳಿಂದ ಹಿಡಿದು ಭಿತ್ತಿಚಿತ್ರಗಳು, ತಾಳೆಯೋಲೆ ಕಾಗದಗಳ ಮೇಲಿನ ಚಿತ್ರಗಳು ಜಲವರ್ಣದಲ್ಲಿಯೇ ರಚಿತವಾಗಿದೆ. ಚಿತ್ರಕಲೆಯ ಶಾಸ್ತ್ರಗ್ರಂಥಗಳು ಜಲವರ್ಣದ ಪುಡಿಗಳನ್ನು ಮಾಡಿಕೊಳ್ಳುವ ಬಗ್ಗೆ ಅನೇಕ ವಿಧಾನಗಳನ್ನು ತಿಳಿಸುತ್ತವೆ. ಈಗೆಲ್ಲಾ ರಾಸಾಯನಿಕ ಪದಾರ್ಥಗಳನ್ನೇ ಬಳಸಿ ಈ ಬಣ್ಣಗಳನ್ನು ತಯಾರಿಸುವ ಅನೇಕ ಕಂಪನಿಗಳಿವೆ. ಅದೇ ಬಣ್ಣಗಳನ್ನು ಕಲಾವಿದ ನೇರವಾಗಿ ಬಳಸಬಹುದಾಗಿದೆ."[೭]

ರುಮಾಲೆ ಚನ್ನಬಸವಯ್ಯನವರು ಈ ಮಾಧ್ಯಮದಲ್ಲಿ ಅದ್ಭುತ ಸಾಧನೆ ಮಾಡಿದ್ದಾರೆ. ಇವರು ಕಲಾಶಾಲೆಯಲ್ಲಿ ಅಕಾಡೆಮಿಕ್ ಶೈಲಿಯನ್ನು ರೂಢಿಸಿಕೊಂಡು ಬಂದ ರುಮಾಲೆಯವರು ಜಲವರ್ಣಗಳಲ್ಲಿ ಪ್ರಯೋಗಿಸಿ ಅಭಿವ್ಯಕ್ತಿಗೊಳಿಸಿದ ಚಿತ್ರಗಳು ಅನೇಕ. ಪಾರದರ್ಶಕ ಜಲವರ್ಣಗಳಲ್ಲಿ ಬಿಳುಪನ್ನು ಬಳಸುವುದಿಲ್ಲ. ವರ್ಣದ ಬಿಳುಪನ್ನು ಕುಂಚದಿಂದಲೇ ನಿಯಂತ್ರಿಸುವುದನ್ನು ಕರಗತ ಮಾಡಿಕೊಂಡಿದ್ದಾರೆ. ಜಲವರ್ಣದ ಚಿತ್ರಗಳನ್ನು ರಚಿಸುವುದೆಂದರೆ ಕಲಾವಿದನಿಗೊಂದು ಸವಾಲು ಇದ್ದಂತೆ. ಆಗ ಒದ್ದೆ ತಂತ್ರ (Wash)ದಲ್ಲಿಯೇ ಹೆಚ್ಚು ಜಲವರ್ಣಗಳ ಚಿತ್ರಗಳನ್ನು ರಚಿಸುತ್ತಿದ್ದರು. ರುಮಾಲೆಯವರೂ ಕೂಡಾ ರಚಿಸಿದ್ದಾರೆ. "ಒದ್ದೆ ತಂತ್ರ ಕಲಾವಿದನಿಗೆ ಒಂದು ಸವಾಲಿನಂತೆ, ನೀರಿನಿಂದ ಒದ್ದೆ ಮಾಡಿದ ಕಾಗದದ ಮೇಲೆ ಬಣ್ಣ ಚೆಲ್ಲಿದಾಗ ಅವು ಎಲ್ಲೆಂದರಲ್ಲಿ ಓಡಾಡತೊಡಗುತ್ತವೆ. ಅವನ್ನು ತಹಬಂದಿಗೆ ತರುವ ಹಂತದಲ್ಲಿ ಕಲಾವಿದ ಸಾಕಷ್ಟು ಕಸರತ್ತು ಮಾಡಬೇಕಾಗುತ್ತದೆ. ಇದಕ್ಕೆ ಸಾಕಷ್ಟು ಪರಿಶ್ರಮ ಹಾಗೂ ತಾಲೀಮು ಬೇಕಾಗುತ್ತದೆ."[೮] ಅಂತಹ ಒಂದು ಸಾಧನೆ ರುಮಾಲೆಯವರಲ್ಲಿತ್ತು. ಅವರ ಅಂದಿನ ಬೆಂಗಳೂರಿನ ನಿಸರ್ಗಚಿತ್ರಗಳು ನಮ್ಮ ಕಣ್ಣ ಮುಂದೆ ಕಟ್ಟಿನಿಲ್ಲುವಂತೆ ರಚಿಸಿದ ಕಲಾಕೃತಿಗಳಲ್ಲಿ ಜಲವರ್ಣದಲ್ಲೇ ಹೆಚ್ಚು ಹೆಚ್ಚು ರಚಿಸಿದ್ದವು. ಹೆಚ್ಚಾಗಿ ಕಲಾವಿದರು ಜಲವರ್ಣಗಳನ್ನು ನಿಸರ್ಗಚಿತ್ರ ರಚಿಸಲು ಬಳಸುತ್ತಾರೆ. ಆದರೆ ರುಮಾಲೆಯವರು ಹೆಚ್ಚುಪಾಲು ಪ್ರಕೃತಿ ಚಿತ್ರಗಳ ಬಿಟ್ಟರೆ ಅಲ್ಪಸ್ವಲ್ಪ ಭಾವಚಿತ್ರಗಳನ್ನು ರಚಿಸಿದ್ದಾರೆ. ಇದರಿಂದ ಜಲವರ್ಣಗಳ ಮೇಲಿನ ಅವರ ಹಿಡಿತ ಹಾಗೂ ಪ್ರೌಢಿಮೆಯು ಅರಿವಾಗುತ್ತದೆ.

---

೬. ಪಿ.ಆರ್. ತಿಪ್ಪೇಸ್ವಾಮಿ ಸಂ, ಚಿತ್ರಕಲಾ ಪ್ರಪಂಚ, ಪು. ೫೭೦

೭. ಕಾಸರವಳ್ಳಿ ಕೆ.ಜಿ. ರವೀಶ್ ಜಿ.ಎಸ್. ಶಣೈ, ಪು. ೧೬

೮. ಪಿ.ಆರ್. ತಿಪ್ಪೇಸ್ವಾಮಿ ಸಂ, ಚಿತ್ರಕಲಾ ಪ್ರಪಂಚ, ಪು. ೫೬೧

**II. ಭಾವಚಿತ್ರಗಳು**

**ಚಿತ್ರ ೧ :** ಧ್ಯಾನದಲ್ಲಿರುವ ಶ್ರೀ ಶಿವಬಾ ಯೋಗಿ ಸ್ವಾಮಿಯವರು ಧ್ಯಾನ ಮುಖರಾಗಿ ಕುಳಿತಿದ್ದಾರೆ. ಸ್ವಾಮೀಜಿಯ ಮುಖದಲ್ಲಿ ಭಕ್ತಿಭಾವದ ತೇಜಸ್ಸು ನೋಡುಗರಿಗೆ ನಿಜವಾಗಿಯು ಕಣ್ಣಮುಂದೆಯೇ ಕೂತು ಧ್ಯಾನಿಸುತ್ತಿದ್ದಾರೆ ಎಂಬಂತೆ ಭಾಸವಾಗುತ್ತದೆ. ಮುಖದಲ್ಲಿ ಶಾಂತಕಳೆ ವಯಸ್ಸಿನ ನಿಖರತೆಯನ್ನು ಸೂಚಿಸುವ ಕಪ್ಪನೆಯ ಕುರುಚಲು ಗಡ್ಡ, ಕಪ್ಪು ಮೀಸೆ, ತಲೆಯ ತುಂಬಾ ಉದ್ದನೆಯ ಕೂದಲು ಮತ್ತು ಅವರ ಎರಡು ಕೈಯನ್ನು ಜೋಡಿಸಿಕೊಂಡು ಎರಡು ಕಾಲುಗಳನ್ನು ಮಡಿಚಿ ಕುಳಿತಿರಬಹುದು ಎಂದು ಊಹಿಸಬಹುದು. ಮುಖದಲ್ಲಿ ಸೂಕ್ಷ್ಮ ನೆರಳು-ಬೆಳಕಿನ ಸಂಯೋಜನೆಯನ್ನು ಜಲವರ್ಣದಲ್ಲಿ ಅತ್ಯಂತ ಸೂಕ್ಷ್ಮವಾಗಿ ತೋರಿಸಿದ್ದಾರೆ. ಚರ್ಮದ (Skin) ಅನುಭವ ನೀಡುವ ರೀತಿಯಲ್ಲಿ ಬಣ್ಣವನ್ನು ತೆಳುವಾಗಿ ಲೇಪಿಸಿದ್ದಾರೆ. ಹಿನ್ನೆಲೆಯಲ್ಲಿ ನೇರಳೆ ಮಿಶ್ರಿತ ತಿಳಿನೀಲಿ ಮತ್ತು ಅಲ್ಲಲ್ಲಿ ಹಳದಿ ಬಣ್ಣವನ್ನು ಲೇಪಿಸಿರುವಂತೆ ಕಾಣುತ್ತದೆ. ಅದು ಅತ್ಯಂತ ಸಹಜತೆಯಿಂದ ವಾಸ್ತವ ನೆಲೆಯಲ್ಲಿದ್ದು ಕೃತಿಗೆ ಮೆರುಗು ತಂದಿದೆ. ರುಮಾಲೆಯವರ ಜಲವರ್ಣ ಕಲಾ ಪ್ರೌಢಿಮೆಗೆ ಸಾಕ್ಷಿಯಾಗಿದೆ.

**ಚಿತ್ರ ೨ : ಮಾಧವರಾವ್ ಕಭೆ :** ಕಭೆಯವರು ಕೂಡ ಶಿವಬಾಲಯೋಗಿ ಸ್ವಾಮೀಜಿಯವರ ಪರಮ ಭಕ್ತರಾಗಿದ್ದರು ಆದಕಾರಣ ಅವರು ಕೂಡ ಗಂಟೆಗಟ್ಟಲೆ ಧ್ಯಾನದಲ್ಲಿ ಕುಳಿತುಕೊಳ್ಳುತ್ತಿದ್ದರು. ಈ ಚಿತ್ರವೊಂದರಲ್ಲಿ ಕಬೆಯರವನ್ನು ತಮ್ಮ ಎರಡು ಕಣ್ಣುಗಳನ್ನು ಮುಚ್ಚಿ ಧ್ಯಾನಿಸುತ್ತಿದ್ದಾರೆ. ಅವರು ತಲೆಯನ್ನು ಸ್ವಲ್ಪ ಪ್ರಮಾಣದಲ್ಲಿ ಬಾಗಿಸಿಕೊಂಡು ತಮ್ಮ ಎರಡು ಕೈಗಳನ್ನು ಜೋಡಿಸಿಕೊಂಡು ಅವರ ಬಲಗಾಲಿನ ಮೇಲೆ ಎಡಗಾಲನ್ನು ಹಾಕಿಕೊಂಡು ಬಲಗಾಲಿನ ಮೊಣಕಾಲಿನ ಮೇಲೆ ಎಡಗೈಯನ್ನು ಊರಿದ್ದಾರೆ, ಮೈಮೇಲೆ ಬಿಳಿಯ ಅರ್ಧತೋಳಿನ ಬನಿಯನ್ ತೊಟ್ಟಿದ್ದಾರೆ. ತಿಳಿನೀಲಿ ಬಣ್ಣದ ಪಂಚೆಯನ್ನು ತೊಟ್ಟಿದ್ದಾರೆ. ಅವರು ಕುಳಿತಿರುವ ಭಂಗಿ ಅಳತೆ ಪ್ರಮಾಣಬದ್ಧವಾಗಿದೆ. ನೆರಳು-ಬೆಳಕನ್ನು ಅತ್ಯಂತ ಸೂಕ್ಷ್ಮತೆಯಿಂದ ತೋರಿಸಿದ್ದಾರೆ. ಹಿನ್ನೆಲೆಯಲ್ಲಿ ಅವರ ಬಲಭಾಗದಲ್ಲಿ ಮನೆಯ ಗೋಡೆಯನ್ನು ಹಳದಿ ನೀಲಿಮಿಶ್ರಿತ ಕೆಂಪು ಬಣ್ಣದಿಂದ ತೋರಿಸಿದ್ದಾರೆ. ಗೋಡೆಯ ಕೆಳಭಾಗದಲ್ಲಿ ಕಾವಿಬಣ್ಣವನ್ನು ತೋರಿಸಿದ್ದಾರೆ. ಅದರ ಹಿಂಬದಿಯಲ್ಲಿ ಹಲಗೆಯಿಂದ ಮಾಡಿದ ಬಾಗಿಲು ಮುಚ್ಚಿರುವಂತೆ ಕಾಣುತ್ತದೆ. ಈ ಕೃತಿಯು ರುಮಾಲೆಯವರ ಕಲಾಗ್ಯಾಲರಿಯಲ್ಲಿ ಕಾಣಬಹುದು.

**ಚಿತ್ರ ೩. ಜಲಸ್ಕಂದನ ವಿದ್ಯೆಯಲ್ಲಿ ಶಿವಬಾಲಯೋಗಿಸ್ವಾಮಿ :** ಚಿತ್ರದಲ್ಲಿ ಸ್ವಾಮೀಜಿಯವರು ನೀರಿನಲ್ಲಿ ಕುಳಿತು ಎದೆ ಮಟ್ಟದವರೆಗೆ ನೀರಿನಲ್ಲಿ ಮುಳುಗಿ ಜಲಸ್ಕಂದನ ವಿದ್ಯೆಯಲ್ಲಿ ತೊಡಗಿದ್ದಾರೆ. "ವಿಶಾಲವಾದ ಭುಜ ಮತ್ತು ಎದೆಗಳಿಗೆ ಇಲ್ಲಿ ನೀಡಿರುವ ವಿಶೇಷ ಪ್ರಾಧನ್ಯತೆಯು ಸಂದರ್ಭೋಚಿತ ಇದರಿಂದ ಈ ವ್ಯಕ್ತಿಯ ಧೀಮಂತಿಕೆ ಮತ್ತು ಪ್ರಾಬಲ್ಯಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸಿದಂತಾಗುತ್ತದೆ. ಆದರೆ ಸಮಗ್ರ ನೋಟದಲ್ಲಿ ಈ ಕೃತಿಯು ವಾಚ್ಯಾರ್ಥಗಳಿಗೆ ಅಂದರೆ ಸಾಂಕೇತಿಕತೆ ಅಥವಾ ವರ್ಣನೆ

'ಡಿಂಗನ್ನಡ' ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ.



(Description)ಗಳಿಗೆ ಹೆಚ್ಚು ವಾಲಿದೆ. ಇದರಿಂದ ದೃಶ್ಯಾನುಭವವೊಂದರ ಅನನ್ಯತೆಯು ನಮಗೆ ದಕ್ಕುವುದಿಲ್ಲ (ಆದರೆ, ಈ ಕೃತಿಯು ಭಾವಾತಿರೇಕಕ್ಕೂ ನಿಖರವಾಗಿಲ್ಲ ಎಂಬುದನ್ನು ಗಮನಿಸುವುದು ಅಗತ್ಯ.)"

**ಚಿತ್ರ ೪. ಸಂಜಯ್ ಕಭೆಯವರ ಭಾವಚಿತ್ರ :** ರುಮಾಲೆಯವರ ಸಂಜಯ್ ಕಬೆ ಅವರ ಭಾವಚಿತ್ರವನ್ನು ೧೯೭೭ರಲ್ಲಿ ಜಲವರ್ಣಮಾಧ್ಯಮದಲ್ಲಿ ರಚಿಸಿದ್ದಾರೆ. ಬಾಲಕನ ಮುಖದಲ್ಲಿ ಮುಗ್ಧತೆಯನ್ನು ತೋರಿಸುತ್ತದೆ. ಮುಖದ ಮೇಲೆ ನೆರಳು ಮತ್ತು ಬೆಳಕು ಕಣ್ಣುಗಳ ನೋಟ ತುಂಬಾ ಆಕರ್ಷಕವಾಗಿ ಮೂಡಿ ಬಂದಿದೆ. ನೀಲಿ ಬಣ್ಣದ ಅಂಗಿಯನ್ನು ತೊಟ್ಟಿದ್ದಾನೆ. ತಲೆಯ ಕೂದಲು ನೈಜತೆಯನ್ನು ತೋರಿಸುತ್ತದೆ. ಹಿಂಬದಿಯಲ್ಲಿ ಹಳದಿ ಬಣ್ಣವನ್ನು ಲೇಪಿಸಿದ್ದಾರೆ. ನೋಡುಗರಿಗೆ ವಯಸ್ಸಿನ ನಿಖರತೆಯನ್ನು ತೋರಿಸುತ್ತದೆ. ಬಣ್ಣಗಳು ಇದೀಗ ಬಳಸಿ ಮಾಡಿರುವಂತೆ ಗೋಚರಿಸುತ್ತದೆ.

**ಚಿತ್ರ ೫: ಬಾಲಕನ ಭಾವಚಿತ್ರ :** ರುಮಾಲೆಯವರು ಯುವಕನ ಒಂದು ಭಾವಚಿತ್ರವನ್ನು ಎದುರು ನೋಟದಲ್ಲಿ ಜಲವರ್ಣ ಮಾಧ್ಯಮದಲ್ಲಿ ಚಿತ್ರಿಸಿದ್ದಾರೆ. ಈ ಕಲಾಕೃತಿಯು ತುಂಬಾ ನೈಜವಾಗಿ ಮೂಡಿಬಂದಿದೆ. ಅಲ್ಲದೆ ನೆರಳು-ಬೆಳಕು ತುಂಬಾ ಸೂಕ್ಷ್ಮವಾಗಿ ಕೃತಿಯಲ್ಲಿ ಮೂಡಿಬಂದಿದೆ. ಈ ಕಲಾಕೃತಿಯಲ್ಲಿ ಕಣ್ಣುಗಳ ಮೇಲ್ನೋಟದ ದೃಶ್ಯ ನೈಜವಾಗಿ ಮೂಡಿಬಂದಿದೆ. ತುಂಬುಗೆನ್ನೆಯ ಮುಖ ನೀಳವಾದ ಮೂಗು ನೈಜತೆಯ ಭಾವನೆಯನ್ನು ಮೂಡಿಸುತ್ತದೆ. ಬಾಲಕನು ತಿಳಿ ಆಕಾಶ ನೀಲಿಯ ವಸ್ತ್ರವನ್ನು ತೊಟ್ಟಿದ್ದಾನೆ. ಈ ಬಾಲಕನು ವಿದ್ಯಾರ್ಥಿ ಎಂದು ಊಹಿಸಬಹುದು. ಕಾವಿಯ ಸಮವಸ್ತ್ರದ ಅಂಗಿಯನ್ನು ತೊಟ್ಟಿರುವಂತೆ ಕಾಣುತ್ತಿದೆ. ಈ ಕೃತಿಯಲ್ಲಿ ಮಗುವಿನ ಮುಗ್ಧತೆಯನ್ನು ಕಾಣಬಹುದು.

### II. ಪ್ರಕೃತಿ ಚಿತ್ರಗಳು

048520

ಪ್ರಕೃತಿ ಚಿತ್ರಗಳನ್ನು ಅಂದಿನಿಂದ ಇಂದಿನವರೆಗೂ ಒಂದೇ ರೀತಿಯಲ್ಲಿ ರಚಿಸುತ್ತಾ ಬಂದಿದ್ದಾರೆ. "ಭಾರತೀಯ ಭೂದೃಶ್ಯಕಲೆ ತನ್ನದೇ ಆದ ವೈಶಿಷ್ಟ್ಯ ಸೂಚಕ ಶೈಲಿಯನ್ನು ಇಂದಿಗೂ ಕಂಡುಕೊಂಡಿಲ್ಲ. ಇಂಪ್ರೆಷನಿಸಂ ತಾಂತ್ರಿಕತೆಯಲ್ಲಿ ಚಿತ್ರಿಸುತ್ತಿರುವ ಈ ಕಲಾವಿದರು ಭಾರತೀಯ ಭೂದೃಶ್ಯಗಳನ್ನು ಯೂರೋಪಿನ ಕಲಾವಿದರು ಪರಿಭಾವಿಸುವಂತೆಯೇ ಚಿತ್ರಿಸುತ್ತಿದ್ದಾರೆ." ಎನ್ನುವ ಮಾತು ಅಕ್ಷರಶಃ ಸತ್ಯ. ಅದೇ ಪಾಶ್ಚಾತ್ಯ ಶೈಲಿಯ ಕಲಾಶಾಲೆಯಲ್ಲಿ ಕಲಿತಿದ್ದರಿಂದ ಅವರ ಪ್ರಕೃತಿ ಚಿತ್ರದಲ್ಲಿ ಆ ಪ್ರಭಾವ ಕಂಡುಬರುತ್ತದೆ.

**ಚಿತ್ರ ೬. ಕೆ.ಆರ್. ಸರ್ಕಲ್ ಇದು ಬೆಂಗಳೂರಿನ ಒಂದು ದೃಶ್ಯ :** ಈ ಚಿತ್ರದ ಎಡಬದಿಯಲ್ಲಿ ಒಂದು ಮನೆಯ ಕಟ್ಟಡವಿದ್ದು ಆ ಮನೆಯ ಕಾಂಪೊಂಡಿನ ಒಳಬಾಗದಲ್ಲಿ ಬಣ್ಣ-ಬಣ್ಣದ ಹೂವಿನ ಮರಗಳಿವೆ. ಮನೆಯ ಬಲಭಾಗದಲ್ಲಿ ಹಳದಿ ಬಣ್ಣದ ಹೂವಿನ ಮರಗಳು ಸಾಲುಸಾಲಾಗಿ ಕಂಡು

ಬರುತ್ತಿವೆ. ಈ ಪ್ರಕೃತಿಯ ಚಿತ್ರವು ರಸ್ತೆಯ ಬದಿಯಲ್ಲೆ ಇರುವಂತೆ ಭಾಸವಾಗುವಂತಿದೆ. ಈ ಚಿತ್ರವು ಹಳೆಯದಾದರೂ ಈಗ ತಾನೇ ಚಿತ್ರಿಸಿದಂತೆ ಇದೆ.

**ಚಿತ್ರ ೭. ಲಾಲ್‌ಬಾಗ್ ಒಳಬಾಗದ ಒಂದು ದೃಶ್ಯ :** ಈ ಚಿತ್ರವು ಬೆಂಗಳೂರಿನ ಲಾಲ್‌ಬಾಗ್‌ನ ಒಂದು ದೃಶ್ಯ. ಇದು ಕೂಡ ಉತ್ತಮವಾದ ಚಿತ್ರವಾಗಿದೆ. ಲಾಲ್‌ಬಾಗ್‌ನ ಒಳಭಾಗವನ್ನು ಚಿತ್ರಿಸಿದ್ದಾರೆ. ಇಲ್ಲಿ ನೆರಳು-ಬೆಳಕಿನ ಸಂಯೋಜನೆ ಅತ್ಯಂತ ನೈಜವಾಗಿ ನಿಖರತೆಯಿಂದ ಕೂಡಿದೆ. ಆ ಒಂದು ಸಾಲು ಮರದ ಹೂಗಳ ಮೈವಳಿಕೆಯು ತುಂಬಾ ನೈಜತೆಯಿಂದ ಮೂಡಿದೆ. ಹಸಿರು ಎಲೆಗಳ ಮಧ್ಯೆ ಕೇಸರಿ ಬಣ್ಣದ ಹೂಗಳು ತುಂಬಾ ಆಕರ್ಷಕವಾಗಿ ಮೂಡಿಬಂದಿವೆ. ಆ ಮರಗಳ ಸಾಲಿನ ಮುಂಭಾಗದಲ್ಲಿ ಹಸಿರು ಮತ್ತು ಹಳದಿ ಮಿಶ್ರಿತ ಬಣ್ಣಗಳಿಂದ ಗರಿಕೆಯ ಹುಲ್ಲನ್ನು ತೋರಿಸಿದ್ದಾರೆ. ಆ ಹಸಿರು ಮರಗಳ ಹಿಂಬದಿಯ ಮೇಲುಭಾಗದಲ್ಲಿ ಆಕಾಶನೀಲಿ ಬಣ್ಣದ ಮೈವಳಿಕೆಯು ಆಕರ್ಷಕವಾಗಿ ಕಾಣುತ್ತದೆ.

**ಚಿತ್ರ ೮. ಚರ್ಚ್‌ವೊಂದರ ಚಿತ್ರ :** ಚರ್ಚ್‌ನ್ನು ಆವರಿಸಿರುವ ಹೂಬಳ್ಳಿಯನ್ನು ರುಮಾಲೆಯವರು ಬಹಳ ಸೊಗಸಾಗಿ ತೋರಿಸಿದ್ದಾರೆ. ಆ ಚರ್ಚ್ ಮುಂಭಾಗದ ಎಡಬದಿಯಲ್ಲಿ ಮೂರು ಹಸಿರು ಬಣ್ಣದ ಅಶೋಕ ಮರಗಳು ಯಥಾದರ್ಶನದ ನೈಜತೆಯನ್ನು ತೋರಿಸುತ್ತಿವೆ. ಚರ್ಚಿನ ಮುಂಭಾಗದ ಬಲಭಾಗದಿಂದ ಪೇಪರ್ ಹೂವಿನ ಬಳ್ಳಿಯು ಇಡೀ ಕಟ್ಟಡವನ್ನು ಆವರಿಸಿಕೊಂಡಿದೆ. ಕಟ್ಟಡದ ಒಳಭಾಗದಲ್ಲಿ ನಾಲ್ಕು ಗಾಲಿಯ ವಾಹನವು ನಿಂತಿದೆ. ಚರ್ಚಿನ ಎರಡೂ ಬದಿಯು ಬಹಳ ಸ್ಪಷ್ಟವಾಗಿ ಕಾಣುತ್ತದೆ. ಚಿತ್ರದಲ್ಲಿ ನೆರಳು-ಬೆಳಕಿನ ಸಂಯೋಜನೆ ಅತ್ಯಂತ ನೈಜವಾಗಿ ನಿಖರತೆಯಿಂದ ಕೂಡಿದೆ. ಕಟ್ಟಡದ ಮುಂಬಾಗದಲ್ಲಿ ಹಳದಿ ಬಣ್ಣದಲ್ಲೇ ನೆಲವನ್ನು ತೋರಿಸಿದ್ದಾರೆ. ಈ ಕಟ್ಟಡವು ಕಲ್ಲಿನಿಂದ ನಿರ್ಮಾಣವಾದಂತೆ ಕಾಣುತ್ತದೆ. ಹೂಬಳ್ಳಿಯ ಗಿಡಗಳನ್ನು ಸ್ಪಷ್ಟವಾಗಿ ಬಣ್ಣಗಳ ಲೇಪನ ಮಾಡಿದ್ದಾರೆ. ಹಿನ್ನೆಲೆಯಲ್ಲಿ ಮೋಡದ ನರ್ತನವನ್ನು ಸೆರೆ ಹಿಡಿದಿದ್ದಾರೆ.

**ಚಿತ್ರ ೯. ಭದ್ರಾ ನದಿಯ ಹಿನ್ನೀರು :** ಈ ಚಿತ್ರ ಭದ್ರಾ ನದಿಯು ತುಂಬಿ ಹರಿಯುವ ಸಂದರ್ಭದಲ್ಲಿ ಚಿತ್ರಿಸಿದ ಚಿತ್ರವಾಗಿದೆ. ತುಂಗಭದ್ರೆಯು ಗಾಳಿಯ ಹೊಡೆತಕ್ಕೆ ನರ್ತಿಸುವಂತೆ ಕಾಣುತ್ತದೆ. ನೀರಿನ ಸಣ್ಣ ಅಲೆಗಳು ಮಾತನಾಡುತ್ತಿವೆಯೇನೋ ಎಂಬಂತೆ ಭಾವನೆಗಳನ್ನು ಹುಟ್ಟಿಸುವಂತಿವೆ. ನೋಡುವ ಸಹೃದಯನಿಗೆ ಆನಂದವನ್ನು ಕೊಡುತ್ತದೆ. ಈ ಚಿತ್ರದಲ್ಲಿ ಆಕಾಶ, ಬೆಟ್ಟ-ಗುಡ್ಡ, ನದಿ ಎಲ್ಲವೂ ಒಂದೇ ರೀತಿಯಲ್ಲಿ ಕಾಣುತ್ತದೆ. ಈ ಜಲವರ್ಣದಲ್ಲಿ ಪಾರದರ್ಶಕವಾಗಿ ಬಣ್ಣಗಳ ಲೇಪನವನ್ನು ಮಾಡಿರುವುದು ಕಂಡುಬರುತ್ತದೆ. ಈ ಕೃತಿಯಲ್ಲಿ ಹೆಚ್ಚು ಕಡು ಮತ್ತು ತಿಳಿ ನೀಲಿ ಬಣ್ಣವನ್ನು ಬಳಸಲಾಗಿದೆ.

**ಚಿತ್ರ ೧೦. ಹಿಡಕಲ್ ಅಣೆಕಟ್ಟು :** ೧೯೭೮ರಲ್ಲಿ ರಚಿತವಾದ ಅದ್ಭುತ ರುಮಾಲೆಯವರ ಈ ಚಿತ್ರವು ಕಲಾಕೃತಿಯಾಗಿದೆ. ಮೇಲ್ಬಾಗದಲ್ಲಿ ಕೂತು ಚಿತ್ರಿಸುವಂತಹ ಶಿಲಾಕೃತಿಯಾಗಿದೆ. ಯಥಾದರ್ಶನದ

ನೈಜತೆಯನ್ನು ಇಲ್ಲಿ ಸ್ಪಷ್ಟವಾಗಿ ತೋರಿಸುತ್ತದೆ. ಈ ಚಿತ್ರದಲ್ಲಿ ದೂರದಿಂದ ಕಾಣುವ ಹೊಲ-ಗದ್ದೆಗಳು, ಕಾಲುದಾರಿಗಳು, ನೀರು ಹರಿಯುವ ಸ್ಥಳ ಹಾಗೂ ಅತಿಥಿಗೃಹದಂತೆ ಕಾಣುವ ತ್ರಿಭುಜಾಕಾರದ ಕಾಂಪೊಂಡಿನ ಮನೆ ಅದರ ಅಕ್ಕ-ಪಕ್ಕದಲ್ಲಿ ಎರಡು ಅಂಚಿನ ಮನೆಗಳು ಕಾಣುತ್ತವೆ. ಆದರೆ ಈ ಕಲಾಕೃತಿಯಲ್ಲಿ ವಿಶೇಷತೆ ಎಂದರೆ ಇಲ್ಲಿ ರುಮಾಲೆಯವರು ಆಕಾಶವನ್ನು ಸೆರೆಹಿಡಿದಿಲ್ಲ. ಈ ಕಲಾಕೃತಿಯನ್ನು ನೋಡುವ ಸಹೃದಯರಿಗೆ ಆಶ್ಚರ್ಯವನ್ನು ಉಂಟುಮಾಡುವಂತಿದೆ.

**ಚಿತ್ರ ೧೧. ಶ್ರೀಲಂಕಾದ ಬೀಚ್ ದೃಶ್ಯ :** ಈ ಕಲಾಕೃತಿಯನ್ನು ರುಮಾಲೆಯವರು ಹೊರದೇಶಕ್ಕೆ ಹೋಗಿ ಕೃತಿ ರಚನೆ ಮಾಡಿಕೊಂಡು ಬಂದಿರುವಂತ ಶ್ರೀಲಂಕಾದ ಒಂದು ನದಿಯ ದೃಶ್ಯ. ಈ ಕಲಾಕೃತಿಯಲ್ಲಿ ನೀರಿನ ಅಲೆಗಳು ದಡಕ್ಕೆ ಬಂದು ಅಪ್ಪಳಿಸಿ ಹಿಂದಕ್ಕೆ ಹೋಗುವಂತಿದೆ. ಕಲಾಕೃತಿಯ ಬಲಭಾಗದ ದೂರದಲ್ಲಿ ಎತ್ತರವಾದ ತೆಂಗಿನ ಮರಗಳು ಕಾಣುತ್ತವೆ. ತೆಂಗಿನ ಮರದ ಪಕ್ಕದ ಕೆಳಭಾಗದಲ್ಲಿ ಸಣ್ಣಪುಟ್ಟ ಮರಗಳು ಇವೆ ಎಂಬಂತೆ ಕಾಣುತ್ತಿವೆ. ನದಿಯ ದಡದಲ್ಲಿ ನೀರಿನ ಅಲೆಯು ಈಗತಾನೆ ದಡವನ್ನು ಮುಟ್ಟಿ ಹಿಂದಕ್ಕೆ ಹೋಗುತ್ತಾ ಇದೆಯೇನೋ ಎಂಬಂತೆ ಅನುಭವವನ್ನು ಕೂಡುವಂತೆ ರುಮಾಲೆಯವರು ಈ ಕಲಾಕೃತಿಯನ್ನು ಅಧ್ಭುತವಾಗಿ ಚಿತ್ರಿಸಿದ್ದಾರೆ. ನೋಡುಗರಿಗೆ ಈ ಕಲಾಕೃತಿಯ ಆಶ್ಚರ್ಯವನ್ನು ಉಂಟುಮಾಡಿಸುವಂತ ಕಲಾಕೃತಿ ಇದಾಗಿದೆ.

**ಚಿತ್ರ ೧೨: ಭದ್ರಾನದಿಯ ದೃಶ್ಯ :** ಈ ಕಲಾಕೃತಿಯನ್ನು ರುಮಾಲೆಯವರು ಭದ್ರಾನದಿಯ ದಡದಲ್ಲೇ ಕೂತು ಚಿತ್ರಿಸಿರುವಂತಹ ಕಲಾಕೃತಿಯಾಗಿದೆ. ಇದರಲ್ಲಿ ನೀರಿನ ಅಲೆಗಳ ರಬಸ ಕಡಿಮೆ ಪ್ರಮಾಣದಲ್ಲಿ ಸಾಧಾರಣವಾದ ಅಲೆಗಳನ್ನು ಕಾಣಬಹುದು. ನೀರಿನ ಮಧ್ಯಭಾಗದಲ್ಲಿ ಇಬ್ಬರು ವ್ಯಕ್ತಿಗಳು ದೋಣಿಯನ್ನು ಚಲಿಸಿಕೊಂಡು ಹೋಗುತ್ತಿದ್ದಾರೆ. ಕಲಾಕೃತಿಯ ಬಲಬದಿಯ ದೂರದಲ್ಲಿ ನದಿಯ ದಡದಲ್ಲೇ ಅಂದರೆ ಬೆಟ್ಟದ ಕೆಳಭಾಗದಲ್ಲೇ ಮನೆಗಳು ಇರುವುದು ಕಂಡುಬರುತ್ತದೆ. ಬಹುಶಃ ಅಲ್ಲಿ ಒಂದು ಪುಟ್ಟ ಹಳ್ಳಿ ಇರಬಹುದು. ಹಾಗೂ ಎಡಭಾಗದಲ್ಲಿ ದೂರಕ್ಕೆ ಇರುವ ಬೆಟ್ಟದ ತುದಿಯ ನೀರಿನ ಮಧ್ಯಭಾಗದಲ್ಲಿ ಕಾಣುತ್ತಿದೆ. ಈ ಚಿತ್ರದಲ್ಲಿ ಹೆಚ್ಚು ನೀಲಿ ಮತ್ತು ನೇರಳೆ ಹಾಗೂ ಹಸಿರು ಬಣ್ಣಗಳನ್ನು ಬಳಸಲಾಗಿದೆ.

**ಚಿತ್ರ ೧೩: ಶ್ರೀಲಂಕಾದ ಒಂದು ದೃಶ್ಯ :** ಈ ಚಿತ್ರಕಲಾಕೃತಿಯನ್ನು ರುಮಾಲೆಯವರು ಒಮ್ಮೆ ಶ್ರೀಲಾಂಕಾಗೆ ಹೋದ ಸಂದರ್ಭದಲ್ಲಿ ರಚಿಸಿದ ಒಂದು ಕಲಾಕೃತಿಯಾಗಿದೆ. ಈ ಚಿತ್ರದಲ್ಲಿ ಎರಡು ಬೆಂಡಿನಂತ ಹಲಗೆಯನ್ನು ತೇಲಿಬಿಟ್ಟಿರುವುದು ಕಂಡುಬರುತ್ತದೆ. ಕಲಾಕೃತಿಯ ಹಿಂಬದಿಯ ಎರಡು ಭಾಗದಲ್ಲೂ ಹಸಿರು ಮತ್ತು ಹಳದಿ ಬಣ್ಣಗಳ ಮರ-ಗಿಡಗಳನ್ನು ತೋರಿಸಿದ್ದಾರೆ. ಇದರಲ್ಲಿ ಪ್ರಮುಖವಾಗಿ ತಿಳಿನೀಲಿ ಬಣ್ಣವನ್ನು ಬಳಸಿಕೊಂಡಿದ್ದಾರೆ. ದೂರದಲ್ಲಿ ಎರಡು ಅಂಚಿನ ಮನೆಯಂತೆ ಗೋಚರವಾಗುತ್ತದೆ. ಒಟ್ಟಾರೆ ಈ ಕಲಾಕೃತಿಯು ನೋಡುಗರಿಗೆ ಆನಂದವನ್ನು ಕೊಡುವಂತಹದ್ದಾಗಿದೆ.

**ಚಿತ್ರ ೧೪: ರಸ್ತೆಯ ಪಕ್ಕದಲ್ಲಿ ಅರಳಿರುವ ಮರ :** ಈ ಕಲಾಕೃತಿಯನ್ನು ರುಮಾಲೆಯವರು ಒಂದು ಕಾರ್ನರ್‌ರಲ್ಲಿ ಕೂತು ರಚಿಸಿರುವ ಕೃತಿಯಾಗಿದೆ. ಇದು ಬೆಂಗಳೂರಿನ ಕೆ.ಆರ್. ಸರ್ಕಲ್ ಎಂದು ಊಹಿಸಬಹುದು. ಈ ಚಿತ್ರದಲ್ಲಿ ಎರಡು ಬದಿಯ ಟಾರ್‌ರಸ್ತೆ ಕಾಣುತ್ತದೆ. ಇದನ್ನು ಗಮನಿಸಿದರೆ ಒಂದು ಮುಖ್ಯ ವೃತ್ತ ಇದರಲ್ಲಿ ನಾಲ್ಕು ಕಡೆಗೂ ಹೋಗುವ ಟಾರ್ ರಸ್ತೆಗಳಿವೆ ಎಂಬಂತೆ ತೋರುತ್ತದೆ. ಈ ಕಲಾಕೃತಿಯ ಎಡ ತಿರುವಿನಲ್ಲಿ ಬಹುದೊಡ್ಡ ಮಹಡಿಯೊಂದು ಕಂಡುಬರುತ್ತದೆ. ಆ ಮಹಡಿಯ ಮುಂಬಾಗದಲ್ಲಿ ಗುಲ್ಮೊಹರ್ ಹೂವಿನ ಮರವೊಂದು ಅರಳಿದ ಹೂಗಳಿಂದ ಮೈದುಂಬಿಕೊಂಡಿದೆ. ಆ ಮರದ ಕೆಳಬಾಗದ ಮುಂಬಾಗದಲ್ಲಿ ಇಬ್ಬರು ಮಹಿಳೆಯರು ಹೋಗುತ್ತಿದ್ದಾರೆ. ನಿಜವಾಗಿಯು ಹೋಗುತ್ತಿದ್ದಾರೆ ಎಂಬಂತೆ ಜೀವಂತಿಕೆಯನ್ನು ತುಂಬಿದ್ದಾರೆ. ತುಂಬಾ ದೂರದಿಂದ ಒಬ್ಬ ವ್ಯಕ್ತಿ ದ್ವಿಚಕ್ರ ವಾಹನದಲ್ಲಿ ಬರುವಂತೆ ಕಾಣುತ್ತದೆ.

ದೂರದಲ್ಲಿ ಮುಂದೆ ಹೋದಂತೆ ಅಲ್ಲಿಯೂ ಕೂಡ ಎರಡು ಬದಿಗೂ ರಸ್ತೆ ಮುಂದುವರೆದಂತೆ ಗೋಚರಿಸುತ್ತದೆ. ಕಲಾಕೃತಿಯ ಬಲಬದಿಯಲ್ಲಿ ಟಾರ್‌ರಸ್ತೆಯು ಮುಂದುವರೆದಂತಿದೆ. ರಸ್ತೆಯ ಎರಡು ಬದಿಯಲ್ಲೂ ಸಾರ್ವಜನಿಕರು ಓಡಾಡುವ ರಸ್ತೆ (ಪುಟ್‌ಬಾತ್)ನ್ನು ಕಲ್ಲಿನ ಬಂಡೆಯಿಂದ ಜೋಡಿಸಿರುವಂತೆ ಕಾಣುತ್ತದೆ. ಈ ಚಿತ್ರದಲ್ಲಿ ಸೂಕ್ಷ್ಮವಾಗಿ ಗಮನಿಸಿದರೆ, ನೆರಳು ಬೆಳಕಿನ ಸಂಯೋಜನೆ ಅತ್ಯಂತ ನೈಜವಾಗಿ ನಿಖರತೆಯಿಂದ ಕೂಡಿದೆ. ಈ ಚಿತ್ರದಲ್ಲಿ ಪ್ರಮುಖವಾಗಿ ಕೆಂಪು, ಹಳದಿ ಮತ್ತು ನೀಲಿಬಣ್ಣವನ್ನು ಬಳಸಿಕೊಂಡು ಬಿಳಿಮಿಶ್ರಿತ ಬಣ್ಣದಿಂದ ಒಪೆಕ್ ಮಾಧ್ಯಮದಲ್ಲಿ ರಚಿಸಿರುವಂತ ಕಲಾಕೃತಿಯಾಗಿದೆ. ಮರದಲ್ಲಿ ಇರುವ ಹೂವನ್ನು ಸೂಕ್ಷ್ಮವಾಗಿ ಗಮನಿಸಿದಾಗ ನಿಜವಾಗಿಯು ನಮ್ಮ ಕಣ್ಣ ಮುಂದೆಯೇ ಇದೆಯೇನೋ ಎಂಬಂತೆ ಬಾಸವಾಗುತ್ತದೆ. ಅಲ್ಲದೆ ನಿಸರ್ಗ ಚಿತ್ರ ರಚಿಸಿರುವಲ್ಲಿನ ಜಾಣ್ಮೆ, ಪ್ರಸ್ತುತ ನೈಜರೂಪದ ಆಳವಾದ ಅಧ್ಯಯನವೆಲ್ಲವೂ ಪ್ರಶಂಸನೀಯವೆನಿಸುತ್ತದೆ. ರುಮಾಲೆಯವರ ಕೃತಿಗಳು ಆ ಸಂಗತಿಗಳ ಹಿಂದಿರುವ ಸತ್ಯದ ಅರಿವನ್ನು ಸಹೃದಯನಿಗೆ ನೀಡುತ್ತದೆ.

**ಚಿತ್ರ ೧೫ ಕಾಲೇಜ್ ಆವರಣದಲ್ಲಿ ಅರಳಿದ ಹೂಗಳು :** ಈ ಚಿತ್ರದಲ್ಲಿ ಕಾಲೇಜಿನ ಆವರಣದಲ್ಲಿ ಹಚ್ಚಹಸಿರನ್ನು ತುಂಬಿ ಬೃಂದಾವನದಂತೆ ಆವರಣದ ಸುತ್ತಲು ಅಲಂಕರಿಸುವಂತ ಪುಷ್ಪಗಳನ್ನು ಹಾಗೂ ಮರದ ಮೇಲಿನ ಪದರಿನ ಸೂಕ್ಷ್ಮತೆಯನ್ನು ಚಿತ್ರಿಸಿದ್ದಾರೆ. ಅದರ ಮೈವಳಿಕೆ ವರ್ಣಗಳು ಮರದಲ್ಲಿ ಮೃದುವಾದ ಹೂವಿನ ಅನುಭವವನ್ನು ನೀಡುತ್ತದೆ. ಚಿತ್ರದಲ್ಲಿ ಎಲ್ಲಿಯೂ ಮಾಸಿದಂತೆ ಕಾಣದೆ ತನ್ನ ತಾಜಾತನ ಹಾಗೂ ಸಿರಿವಂತಿಕೆಯನ್ನು ಉಳಿಸಿಕೊಂಡಿದೆ. ದೂರದಲ್ಲಿ ಅಲ್ಲಲ್ಲಿ ಗಿಡಮರಗಳಿವೆ. ಭೂಮಿಯ ಮೇಲೆ ಬಿಸಿಲಿನ ಬೆಳಕು ಅದರೊಂದಿಗೆ ಮರಗಳ ನೆರಳನ್ನು ಚಿತ್ರಿಸಿದ್ದಾರೆ. ಆವರಣದ ಮುಂಭಾಗದಲ್ಲಿ ಕಲ್ಲಿನಿಂದ ಕಟ್ಟಿದ ಕಾಂಪೊಂಡನ್ನು ತೋರಿಸಿದ್ದಾರೆ. ಕಟ್ಟಡದ ಮುಂಭಾಗದಲ್ಲಿ ವಿವಿಧ ರೀತಿಯ

ಫಲಪುಷ್ಪಗಳು ಅರಳಿ ನಿಂತಿವೆ. ಆವರಣದ ಬದಿಯಲ್ಲಿ ಇಬ್ಬರು ಮಹಿಳೆಯರು ಹೋಗುವಂತೆದೆ, ಹಿಂಬದಿಯ ಆಕಾಶವನ್ನು ಅವರದೇ ಆದ ಶೈಲಿಯ ಮೈವಳಿಕೆಯನ್ನು ಸೃಷ್ಟಿಸಿದ್ದಾರೆ.

**ಚಿತ್ರ ೧೬. ಆಲ್ಕೋಕರ್ ಚಿತ್ರಮಂದಿರದ ಒಂದು ಬದಿ :** ಈ ಚಿತ್ರಕೃತಿಯನ್ನು ರುಮಾಲೆ ಚನ್ನಬಸವಯ್ಯನವರು ಚಿತ್ರಮಂದಿರದ ಪಕ್ಕದಲ್ಲಿರುವ ಹೂವಿನ ಗಿಡಗಳನ್ನು ಆಯ್ದುಕೊಂಡು ಚಿತ್ರರಚನೆ ಮಾಡಿದ್ದಾರೆ. ಚಿತ್ರಮಂದಿರದ ಆವರಣದ ಒಳಭಾಗದಲ್ಲಿ ಗೋಡೆಯ ಬದಿಯಲ್ಲೆ ಹೂವಿನ ಸಾಲುಗಳ ಗಿಡಗಳನ್ನು ಚಿತ್ರಿಸಿದ್ದಾರೆ. ಆ ಗಿಡದ ಕೆಳಭಾಗದಲ್ಲಿ ಹಚ್ಚ ಹಸಿರಿನ ಗರಿಕೆಯು ಬೆಳೆದಿರುವುದು ಮತ್ತು ಆ ಗಿಡಗಳ ನೆರಳನ್ನು ತುಂಬಾ ನಾಜುಕಾಗಿ ತೂರಿಸಿದ್ದಾರೆ ಹಾಗೂ ಕೋಳಿಯು ತನ್ನ ಮರಿಗಳ ಜೊತೆಯಲ್ಲಿ ಓಡಾಡುತ್ತಿರುವ ದೃಶ್ಯವನ್ನು ತಮ್ಮ ಕುಂಚದಿಂದ ಸೂಕ್ಷ್ಮವಾಗಿ ತೋರಿಸಿದ್ದಾರೆ. ಮತ್ತು ಹಿಂಭಾಗದ ಗೋಡೆಯ ಭಾಗವನ್ನು ನಿಜವಾದ ಗೋಡೆ ನಮ್ಮ ಕಣ್ಣೆದುರಿಗೆ ಇದೆ ಎಂಬಂತೆ ಸ್ಪಷ್ಟತೆಯಿಂದ ಕಾಣುತ್ತದೆ. ಗೋಡೆಯ ಮೇಲೆ ಎರಡು ಕಿಟಕಿಗಳನ್ನು ತೋರಿಸಿದ್ದಾರೆ. ಆ ಗೋಡೆಯನ್ನು ಗಮನಿಸಿದರೆ ಮಹಡಿಯ ಮೆಲೆ ಹೋಗಲು ಮೆಟ್ಟಲಿನ ಗೋಡೆಯಂತೆ ಕಾಣುತ್ತದೆ. ಆ ಮೆಟ್ಟಲಿನ ಹಿಂಭಾಗದ ಗೋಡೆ ಮತ್ತು ಅಲ್ಲಿಯೂ ಒಂದು ಕಿಟಕಿಯನ್ನು ತೋರಿಸಿದ್ದಾರೆ. ಹೂಗಳ ಸ್ಪಷ್ಟತೆಯನ್ನು ನಿಖರವಾಗಿ ಬಣ್ಣಗಳ ಮೈವಳಿಕೆಯ ರೂಪದಲ್ಲಿ ತೋರಿಸಿದ್ದಾರೆ. ಒಟ್ಟಾರೆ ಆ ಸನ್ನಿವೇಶದ ದೃಶ್ಯವನ್ನು ಸೆಲೆಹಿಡಿದಿದ್ದಾರೆ.

**ಚಿತ್ರ ೧೭. ಕಬ್ಬನ್ ಪಾರ್ಕ್‌ನಲ್ಲಿ ಹಳದಿ ಹೂವಿನ ಮರ :** ಈ ಚಿತ್ರದಲ್ಲಿ ಕೇಂದ್ರ ಬಿಂದುವಾಗಿ ಕಾಣುವುದು ಹಳದಿ ಹೂವಿನ ಮರ. ಈ ಹೂವಿನ ಮರವನ್ನು ತುಂಬಾ ನೈಜರೂಪದಲ್ಲಿ ತೋರಿಸಿದ್ದಾರೆ. ಅದರಲ್ಲಿಯೂ ಪ್ರತಿಯೊಂದು ಹೂವಿನ ಕಾಂತಿಯನ್ನು ಸ್ಪಷ್ಟವಾಗಿ ತೋರಿಸಿದ್ದಾರೆ. ಆ ಮರದ ಎಡಬದಿಯಲ್ಲಿ ಚಿಕ್ಕ ಗೇಟ್ ಇದೆ, ಗೇಟಿನ ಸುತ್ತಲು ಹೂ ಬಳ್ಳಿಗಳು ಆವರಿಸಿಕೊಂಡಿವೆ. ಬಲಬದಿಯ ದೂರದಲ್ಲಿ ತಾಯಿ ಮಗುವಿನ ಚಿತ್ರವನ್ನು ಭಾವನಾತ್ಮಕವಾಗಿ ತೋರಿಸಿದ್ದಾರೆ. ತಾಯಿ ಮಗುವಿನ ಬಲಭಾಗದಲ್ಲಿ ಹೆಸರಿ ಮತ್ತು ಹಳದಿ ಮಿಶ್ರಿತ ದೊಡ್ಡ ಮರವಿದೆ. ಕೆಳಭಾಗದಲ್ಲಿ ಸಿಮೆಂಟ್ ಗಾರೆಯ ಮೇಲೆ, ಎಡೆಬದಿಯಲ್ಲಿ ಪಕ್ಕದ ಮರದ ನೆರಳನ್ನು ತೋರಿಸಿದ್ದಾರೆ. ಈ ಕಲಾಕೃತಿಯನ್ನು ವೀಕ್ಷಣೆ ಮಾಡುವ ಸಹೃದಯನಿಗೆ ಈ ಕಲಾಕೃತಿಯು ಮುಂದ ನೀಡುವಂತೆ ತೋರುತ್ತದೆ.

**ಚಿತ್ರ ೧೮. ಏತಾ ನೀರಾವರಿ ತೋಟದ ದೃಶ್ಯ :** ಈ ಚಿತ್ರವು ಕೃಷಿ ಹಾಗೂ ಕೈಗಾರಿಕೆಗೆ ಸಂಬಂಧಪಟ್ಟ ಪ್ರಕೃತಿ ಚಿತ್ರ ಇದಾಗಿದೆ. ಇದರಲ್ಲಿ ಕೃಷಿಕರು ಬಾವಿಯಲ್ಲಿರುವಂತ ನೀರನ್ನು ತೋಟಕ್ಕೆ ಹಾಯಿಸಲು ಅವರದೆ ಆದ ತಂತ್ರಗಾರಿಕೆಯನ್ನು ಉಪಯೋಗಿಸಿಕೊಂಡು ತೋಟಕ್ಕೆ ನೀರನ್ನು ಹಾಯಿಸುತ್ತಿದ್ದಾರೆ. ಅಂದಿನ ಕಾಲದಲ್ಲಿ ಎಲ್ಲಾ ಕಡೆಯೂ ವಿದ್ಯುತ್ ಬಳಕೆ ಇರಲಿಲ್ಲಾ ಆದಕಾರಣ ಈ ತಂತ್ರವನ್ನು ಉಪಯೋಗಿಸಿ ಹೊಲಗದ್ದೆಗಳಿಗೆ ನೀರನ್ನು ತುಂಬಿಸುತ್ತಿದ್ದರು. ಈ ಕಲಾಕೃತಿಯ

ಹಿಂಭಾಗದಲ್ಲಿ ತೆಂಗಿನ ತೋಟವನ್ನು ಚಿತ್ರಿಸಿದ್ದಾರೆ. ತೋಟದ ಎಡಬದಿಯ ದೂರದಲ್ಲಿ ಒಂದು ಅಂಚಿನ ಮನೆಯನ್ನು ಚಿತ್ರಿಸಿದ್ದಾರೆ. ಕಲಾಕೃತಿಯ ಕೇಂದ್ರ ಬಿಂದು ಬಾವಿಯಿಂದ ತುಂಬಿ ಹಾಕಿದ ನೀರು ಕಾಲುವೆಯ ಮುಖಾಂತರ ಹರಿದು ಹೋಗುವುದು ಮುಖ್ಯವಾಗಿ ಕಾಣುತ್ತದೆ. ಒಟ್ಟಾರೆ ನೋಡಿದಾಗ ಇಲ್ಲಿ ಶ್ರಮವನ್ನು ವಹಿಸಿ ಕೆಲಸಮಾಡುವ ದೃಶ್ಯ ಇದಾಗಿದೆ.

**ಚಿತ್ರ ೧೯. ಮದ್ರಾಸ್ ಕೇಂದ್ರ ರೈಲುನಿಲ್ದಾಣ :** ಈ ಚಿತ್ರವನ್ನು ರುಮಾಲೆ ಅವರು ಮದ್ರಾಸ್‌ಗೆ ಬೇಟಿ ಕೊಟ್ಟಾಗ ಚಿತ್ರಿಸಿಕೊಂಡು ಬಂದಂತಹ ಕಲಾಕೃತಿ. ಮದ್ರಾಸ್ ರೈಲು ನಿಲ್ದಾಣದಲ್ಲಿ ರೈಲು ಹೋಗುತ್ತಿರುವಂತೆ ಕಾಣುತ್ತದೆ. ಬಲ ಬದಿಯಲ್ಲಿ ಪ್ರಯಾಣಿಕರು ಕುಳಿತುಕೊಳ್ಳಲು ಆಸನಗಳನ್ನು ಹಾಕಿದ್ದಾರೆ. ಬಿಸಿಲಿನ ರಕ್ಷಣೆಗೆ ಮೇಲ್ಛಾವಣಿಯನ್ನು ತೋರಿಸಿದ್ದಾರೆ. ಎಡಬದಿಯಲ್ಲಿ ರೈಲ್ವೆ ಕಚೇರಿಯನ್ನು ತೋರಿಸಿದ್ದಾರೆ. ಮತ್ತು ರೈಲಿನ ಮುಂಭಾಗ ದೂರದಲ್ಲಿ ಗಡಿಯಾದರ ಕಂಬವನ್ನು ಸ್ಪಷ್ಟತೆಯಿಂದ ತೋರಿಸಿರುವುದು ಕಂಡುಬರುತ್ತದೆ. ಒಟ್ಟಿನಲ್ಲಿ ಈ ಕೃತಿಯನ್ನು ನೋಡುವವರಿಗೆ ರೈಲು ನಿಲ್ದಾಣವೆಂದು ಗೋಚರವಾಗುತ್ತದೆ.

**ಚಿತ್ರ ೨೦. ಆಲಮಟ್ಟಿ ಅಣೆಕಟ್ಟು :** ರುಮಾಲೆ ಅವರು ಆಲಮಟ್ಟಿ ಡ್ಯಾಂ ಬಳಿಹೋಗಿ ೧೯೭೦ರಲ್ಲಿ ರಚಿಸಿದಂತ ಕಲಾಕೃತಿಯಾಗಿದೆ. ಈ ಕೃತಿಯನ್ನು ಅವರು ಮೇಲಿನ ಭಾಗದಿಂದ ಕುಳಿತು ಚಿತ್ರಸಿದ ಚಿತ್ರವೆಂದು ತಿಳಿದುಬರುತ್ತದೆ. ಬೆಟ್ಟದ ಮುಂಭಾಗದಲ್ಲಿ ನೀರು ಹರಿಯುವ ಸ್ಥಳಗಳನ್ನು ನಿಖರವಾಗಿ ತೋರಿಸಿದ್ದಾರೆ. ದೂರದಲ್ಲಿ ಕಲ್ಲಿನ ರಾಶಿಗಳು ಭೂಮಿಯ ತಗ್ಗುದಿನ್ನೆಗಳನ್ನು ಖಚಿತವಾಗಿ ತೋರಿಸಿದ್ದಾರೆ. ಈ ಕೃತಿಯಲ್ಲಿ ಹಸಿರು, ನೀಲಿ, ಕೆಂಪುಗಳನ್ನು ಪ್ರಮುಖವಾಗಿ ತೋರಿಸಿದ್ದಾರೆ. ಕಲಾವಿಕ್ಷಕನಿಗೆ ದೊಡ್ಡಬೆಟ್ಟದ ಮೇಲೆ ನಿಂತು ನೋಡುತ್ತಿದ್ದೇನೆ ಎಂಬಂತ ಅನುಭವವನ್ನು ಕೂಡ ಕಲಾಕೃತಿಯಾಗಿದೆ.

**ಚಿತ್ರ ೨೧. ಲಾಲ್‌ಬಾಗ್ ಕಾರಂಜಿ :** ರುಮಾಲೆ ಚನ್ನಬಸವಯ್ಯನವರು ಬೆಂಗಳೂರಿನ ಪ್ರಮುಖ ವಾದ ಎಲ್ಲಾ ಸ್ಥಳಗಳಲ್ಲಿ ಹೋಗಿ ಪ್ರಕೃತಿ ಚಿತ್ರಗಳನ್ನು ರಚಿಸಿದ್ದಾರೆ. ಅದರಲ್ಲಿ ಲಾಲ್‌ಬಾಗ್‌ನಲ್ಲಿ ಸಾಕಾಷ್ಟು ಕಲಾಕೃತಿಗಳನ್ನು ರಚಿಸಿದ್ದಾರೆ. ಅದರಲ್ಲಿ ಕಾರಂಜಿಯ ದೃಶ್ಯವು ಒಂದಾಗಿದೆ. ಲಾಲ್‌ಬಾಗ್ ಆವರಣದ ಒಳಭಾಗದಲ್ಲಿ ನೀರಿನ ಚಿಲುಮೆಯನ್ನು ತುಂಬಾ ನೈಜರೀತಿಯಲ್ಲಿ ರಚನೆ ಮಾಡಿದ್ದಾರೆ. ನೋಡುಗರಿಗೆ ನಾವು ಲಾಲ್‌ಬಾಗ್‌ನಲ್ಲಿ ಇದ್ದೇವೆ ಎಂಬಂತೆ ತೋರುವ ರೀತಿಯಲ್ಲಿ ಚಿತ್ರ ರಚಿಸಿದ್ದಾರೆ. ಇದರಲ್ಲಿ ಬಿಳಿ, ನೀಲಿ, ಹಸಿರು ಮತ್ತು ಹಳದಿ ಬಣ್ಣವನ್ನು ಪ್ರಮುಖ ಬಣ್ಣಗಳಾಗಿ ತೋರಿಸಿದ್ದಾರೆ. ನೋಡುಗರಿಗೆ ಖುಷಿ ನೀಡುವಂತ ಚಿತ್ರಕೃತಿಯಾಗಿದೆ.

**ಚಿತ್ರ ೨೨. ಕಾರ್ಖಾನೆಯ ಬದಿಯಲ್ಲಿರುವ ಗುಡಿಸಲುಗಳು :** ಈ ಚಿತ್ರವನ್ನು ರುಮಾಲೆಯವರು ೧೯೭೧ರಲ್ಲಿ ರಚಿಸಿದ ಕೃತಿಯು ಇದಾಗಿದೆ. ಕಾರ್ಖಾನೆಯ ಹತ್ತಿರ ಗುಡಿಸಲುಗಳಲ್ಲಿ ಜೀವನ ಸಾಗಿಸುವ

ಜನ ಸಾಮಾನ್ಯರ ಸ್ಥಿತಿಗತಿಯನ್ನು ಆಲೋಚಿಸುವಂತಹ ಕಲಾಕೃತಿ ಇದಾಗಿದೆ. ಎಡಭಾಗದ ದೂರದಲ್ಲಿ ಕಾರ್ಖಾನೆಗಳಿವೆ. ಅದರ ಪಕ್ಕದಲ್ಲಿಯೇ ಸಣ್ಣಪುಟ್ಟ ಗುಡಿಸಲಿನ ಮುಂಭಾಗದಲ್ಲಿ ಅಲ್ಲಿಯ ಕಾರ್ಮಿಕರು ತಮ್ಮ ಕೆಲಸಗಳಲ್ಲಿ ಕಾರ್ಯನಿರತರಾಗಿದ್ದಾರೆ. ಗುಡಿಸಲುಗಳಿವೆ. ಅವುಗಳ ಸುತ್ತಮುತ್ತ ಕೊಳಚೆಯಿಂದ ಕೂಡಿದೆ ಎಂಬುದನ್ನು ಸ್ಪಷ್ಟವಾಗಿ ತೋರಿಸಿದ್ದಾರೆ. ಹಾಗೂ ಗುಡಿಸಲಿನ ಹಿಂಭಾಗದಲ್ಲಿ ಮರಗಳ ಸಾಲು ಮತ್ತು ಮತ್ತೊಂದು ಕಾರ್ಖಾನೆ ಕಟ್ಟಲು ಪೂರ್ವಬಾವಿಯಾಗಿ ಕಬ್ಬಿಣದ ಕಂಬಿಗಳನ್ನು ನಿಲ್ಲಿಸಿರುವ ದೃಶ್ಯವನ್ನು ನಾವು ಕಾಣಬಹುದು. ಮೇಲ್ಭಾಗದಲ್ಲಿ ಮೋಡಗಳ ಮೈವಳಿಕೆಯನ್ನು ತಮ್ಮ ಕುಂಚಗಳಿಂದ ಅವರದೇ ಆದ ಕಲಾಶೈಲಿಯಲ್ಲಿ ಚಿತ್ರಿಸಿದ್ದಾರೆ. ಒಟ್ಟಿನಲ್ಲಿ ಹೇಳುವುದಾದರೆ ಅಂದಿನ ಪ್ರಸ್ತುತ ಸಂದರ್ಭದಲ್ಲಿ ಅಲ್ಲಿಯ ಜನ ಸಾಮಾನ್ಯರ ಸ್ಥಿತಿಗತಿಯನ್ನು ಕಣ್ಮುಂದೆ ಕಟ್ಟಿಕೊಟ್ಟಿದ್ದಾರೆ.

**ಚಿತ್ರ ೨೩. ಪ್ರಕೃತಿಯ ಮಡಿಲಿನಲ್ಲಿ ಮಂಟಪದ ದೃಶ್ಯ :** ಈ ಚಿತ್ರಕಲಾ ಕೃತಿಯನ್ನು ಜಲವರ್ಣ ಮಾಧ್ಯಮದಲ್ಲಿ ನೈಜತೆಯಿಂದ ಚಿತ್ರರಚನೆ ಮಾಡಿದ್ದಾರೆ. ಕಲಾಕೃತಿಯ ತುಂಬಾ ಹಚ್ಚ ಹಸಿರಿನ ಗರಿಕೆಯ ಹುಲ್ಲನ್ನು ತೋರಿಸಿದ್ದಾರೆ. ಅದರ ಮಧ್ಯಭಾಗದಲ್ಲಿ ಒಂದು ಮಂಟಪದ ದೃಶ್ಯವಿದೆ. ಆ ಮಂಟಪದ ಹಿಂಬದಿಯಲ್ಲಿ ಸಾಲುಮರಗಳು, ಬೆಟ್ಟಗುಡ್ಡಗಳನ್ನು ತೋರಿಸಿದ್ದಾರೆ. ಈ ಕಲಾಕೃತಿಯನ್ನು ನೋಡಿದ ಕೂಡಲೆ ಪ್ರಕೃತಿಯ ಒಳಗೆ ಹೋಗಿದ್ದೇವೆ ಎಂಬಂತೆ ಭಾಸವಾಗುವ ರೀತಿಯಲ್ಲಿ ಚಿತ್ರರಚನೆಯಾಗಿದೆ. ಇಲ್ಲಿ ಹಸಿರು, ಹಳದಿ, ನೀಲಿ, ತಿಳಿಕೇಸರಿ ಬಣ್ಣಗಳನ್ನು ಬಳಸಲಾಗಿದೆ, ಹಳದಿ ನೀಲಿಹಸಿರನ್ನು ಪ್ರಮುಖ ಬಣ್ಣಗಳಾಗಿ ತೆಗೆದುಕೊಂಡಿದ್ದು ನೋಡಗರಿಗೆ ಆಕರ್ಷಕವಾಗಿ ಕಾಣುತ್ತದೆ.

**ಚಿತ್ರ ೨೪. ಪ್ರಕೃತಿಯ ಒಂದು ದೃಶ್ಯ :** ಈ ಚಿತ್ರಣವು ಬಹಳ ಸರಳವಾಗಿ ಚಿತ್ರಿಸಿರುವ ಕೃತಿಯಾಗಿದೆ. ಇದು ಜಲವರ್ಣಗಳಿಂದ ಪಾರದರ್ಶಕ ಮಾಧ್ಯಮದಲ್ಲಿ ರಚನೆಗೊಂಡಿದೆ. ಚಿತ್ರದ ಬಲಬದಿಯಲ್ಲಿ ಉದ್ದನೆಯ ಮರದ ಟೊಂಗೆಯನ್ನು ಕಾಣಬಹುದು. ಅದರ ಬಲಬದಿಯಲ್ಲೆ ತಾಳೆಮರವು ತುಂಬಾ ಎತ್ತರವಾಗಿ ನಿಂತಿದೆ. ಇನ್ನೆರಡು ಮರಗಳು ಅದಕ್ಕಿಂತ ಚಿಕ್ಕದಾಗಿದೆ. ಈ ದೃಶ್ಯವು ಎತ್ತರವಾದ ಸ್ಥಳದಲ್ಲಿ ಹಾಗೂ ಮರಳುಗಾಡಿನ ಪ್ರದೇಶದಲ್ಲಿರುವಂತ ಸನ್ನಿವೇಶದಂತೆ ತೋಚುತ್ತದೆ. ಈ ಕಲಾಕೃತಿಯಲ್ಲಿ ಹಸಿರು, ನೀಲಿ, ಹಳದಿ, ಬಣ್ಣಗಳನ್ನು ಪ್ರಮುಖ ಬಣ್ಣಗಳಾಗಿ ಬಳೆಸಿಕೊಂಡಿದ್ದಾರೆ.

**ಚಿತ್ರ ೨೫. ಹಳದಿ ಹೂವಿನ ಮರದ ದೃಶ್ಯ :** ಈ ಕಲಾಕೃತಿಯನ್ನು ರುಮಾಲೆ ಅವರು ಬೆಂಗಳೂರಿನ ಪಾರ್ಕ್‌ವೊಂದರ ದೃಶ್ಯವನ್ನು ಆಯ್ದುಕೊಂಡು ಚಿತ್ರಿಸಿದ್ದಾರೆ ಎಂಬಂತೆ ತೋರುತ್ತದೆ. ಈ ಕಲಾಕೃತಿಯಲ್ಲಿ ಕೇಂದ್ರಬಿಂದುವಾಗಿ ಹಳದಿ ಹೂವಿನ ಮರವನ್ನು ಗಮನಿಸಬಹುದು. ಆ ಮರದಲ್ಲಿರುವ ಹಳದಿಯ ಬಣ್ಣದ ಹೂಗಳನ್ನು ತುಂಬಾ ಸೂಕ್ಷ್ಮತೆಯಿಂದ ಹಾಗೂ ಆ ವಸ್ತುವಿನ ಯಥಾದರ್ಶನದ ಸ್ಪಷ್ಟತೆಯು ಅರ್ಥಪೂರ್ಣವಾಗಿದೆ. ಗಾಢವಾದ ವರ್ಣಗಳನ್ನು ಬಳಸಿ ನೆರಳು ಬೆಳಕನ್ನು ತೋರಿಸಿದ್ದಾರೆ ಹಾಗೂ ಅದರ ಎಡಬದಿಯಲ್ಲಿ ಗಿಡ ಮರಗಳು ಮತ್ತು ಮರದ ಪಕ್ಕದಲ್ಲಿರುವ ಕಾಲುದಾರಿಯು ಇಲ್ಲಿ

ನೈಜವಾಗಿ ಮೂಡಿಬಂದಿದೆ. ಹೂವಿನಲ್ಲಿ ವರ್ಣಗಳ ವಿನ್ಯಾಸ ಅದ್ಭುತವಾಗಿ ಮೂಡಿಬಂದಿದೆ. ಇದರ ಹಿಂಬದಿಯ ಆಕಾಶವನ್ನು ತಿಳಿನೀರಿ ಬಣ್ಣದಿಂದ ಲೇಪನಮಾಡಿದ್ದಾರೆ.

**ಚಿತ್ರ ೨೬. ಶ್ರೀ ಪಶುಪತಿನಾಥ ಲಿಂಗಮಂ ಬೆಂಗಳೂರು :** ಈ ಚಿತ್ರಕಲಾ ಕೃತಿಯನ್ನು ರುಮಾಲೆ ಚನ್ನಬಸವಯ್ಯನವರು ಅವರ ಪರಿಚಿತ ವ್ಯಕ್ತಿಯ ಮನೆಯನ್ನು ಚಿತ್ರಿಸಿರಬಹುದು. ಮಹಡಿಯ ಮನೆಯ ಮುಂದೆ ಎರಡು ಒಂದೇ ಸಮಾನವಾಗಿ ಬೆಳೆದು ನಿಂತಿರುವ ಮರಗಳಿವೆ. ಆ ಮರಗಳು ಮನೆಯ ಮಹಡಿಯನ್ನು ಕಾಣದಂತೆ ಮುಚ್ಚಿಕೊಂಡಿವೆ. ಮರದ ಕೆಳಭಾಗದಲ್ಲಿ ಸ್ವಲ್ಪ ಮಟ್ಟಿಗೆ ಮಾತ್ರ ಮನೆಯ ಗೋಡೆಯು ಕಾಣುತ್ತದೆ. ಆ ಎರಡು ಮರಗಳು ಸಾರ್ವಜನಿಕರು ಓಡಾಡುವ ರಸ್ತೆ ಬದಿಯಲ್ಲಿವೆ. ಮರದ ಎಲೆಗಳಿಗೆ ಬಿಳಿ ಮಿಶ್ರಿತ ಬಣ್ಣಗಳನ್ನು ಬಳಸಿಕೊಂಡಿದ್ದಾರೆ. ಮನೆಯ ಗೋಡೆಗೆ ಕೇಸರಿಬಣ್ಣವನ್ನು ಲೇಪನ ಮಾಡಿದ್ದಾರೆ. ಬೆಳಕು ನೆರಳನ್ನು ನೈಜವಾಗಿ ತೋರಿಸಿದ್ದಾರೆ. ಮರದ ನೆರಳನ್ನು ಭೂಮಿಯ ಮೇಲೆ ಸ್ಪಷ್ಟವಾಗಿ ತೋರಿಸಿದ್ದಾರೆ. ಈ ಕಲಾಕೃತಿಯು ಸಹೃದಯನಿಗೆ ಆಕರ್ಷಣೆಯಾಗಿ ಕಾಣಿಸುತ್ತದೆ.

**ಚಿತ್ರ ೨೭. ಬಂಡಿಪುರದ ಕೆರೆಯ ಚಿತ್ರ :** ಈ ಚಿತ್ರವನ್ನು ೧೯೮೭ರಲ್ಲಿ ರುಮಾಲೆಯವರು ಬಂಡಿಪುರಕ್ಕೆ ಹೋಗಿ ಅಲ್ಲಿಯ ಕೆರೆಯನ್ನು ತುಂಬಾ ಸೊಗಸಾಗಿ ಚಿತ್ರಿಸಿಕೊಂಡು ಬಂದಿದ್ದಾರೆ. ಈ ಕಲಾಕೃತಿಯಲ್ಲಿ ಕೆರೆಯ ನೀರು ಅಲ್ಲಲ್ಲಿ ನಿಂತಿರುವುದು ಮತ್ತು ಜುಳುಜುಳನೆ ಹರಿದುಬರುತ್ತಿರುವುದು ಹಾಗೂ ನೀರನ್ನು ತಡೆಯಲು ಮಣ್ಣಿನಿಂದ ಕಟ್ಟಿದ ಎತ್ತರವಾದ ಪ್ರದೇಶವನ್ನು ತುಂಬ ನೈಜರೀತಿಯಲ್ಲಿ ತೋರಿಸಿದ್ದಾರೆ. ನೀರಿನ ಹಿಂಬದಿಯಲ್ಲಿ ಗಿಡ ಮರಗಳ ಸಾಲುಗಳನ್ನು ತೋರಿಸಿದ್ದಾರೆ. ಈ ಕಲಾಕೃತಿಯಲ್ಲಿ ನೀಲಿ ಮತ್ತು ಹಸಿರು ಬಣ್ಣಗಳನ್ನು ಪ್ರಮುಖವಾಗಿ ಬೆಳೆಸಿಕೊಂಡಿರುವುದು ಕಂಡುಬರುತ್ತದೆ.

**ಚಿತ್ರ ೨೮. ಬಂಡಿಪುರದ ಕೆರೆಯಲ್ಲಿನ ಪ್ರತಿಬಿಂಬ :** ಈ ಚಿತ್ರ ಕಲಾಕೃತಿಯನ್ನು ರುಮಾಲೆ ಚನ್ನಬಸವಯ್ಯನವರು ೧೯೭೩ರಲ್ಲಿ ರಚಿಸಿರುವಂತೆ ಬಂಡಿಪುರದ ಪ್ರಕೃತಿಯ ಚಿತ್ರ. ಈ ಪ್ರಕೃತಿಯ ಚಿತ್ರಣವನ್ನು ಚಿತ್ರಿಸಿದ ನಂತರ ೧೯೮೭ರಲ್ಲಿ ಮತ್ತೊಂದು ಕಲಾಕೃತಿಯನ್ನು ರಚಿಸಿರುವುದು ಕಂಡುಬಂದಿದೆ. ಈ ಕಲಾಕೃತಿಯನ್ನು ಕೆರೆಯ ನೀರನ್ನು ತಡೆಗಟ್ಟಲು ಕಟ್ಟಿರುವ ಸೇತುವೆಯ ಪಕ್ಕದಲ್ಲಿ ಎರಡು ಬದಿಯಲ್ಲಿ ಮರಗಳನ್ನು ತೋರಿಸಿದ್ದಾರೆ. ಎರಡು ಬದಿಯ ಮಧ್ಯಭಾಗದಲ್ಲಿ ದೂರದಿಂದ ಗಿಡಮರ ಬೆಟ್ಟಗಳನ್ನು ತುಂಬಾ ಸೂಕ್ಷ್ಮವಾಗಿ ತೋರಿಸಿದ್ದಾರೆ. ಇಲ್ಲಿ ಅರ್ಧಭಾಗ ಪ್ರಕೃತಿಯನ್ನು ತೋರಿಸಿದರೆ ಇನ್ನು ಅರ್ಧಭಾಗದಲ್ಲಿ ಆಕಾಶವನ್ನು ತೋರಿಸಿದ್ದಾರೆ. ಇಲ್ಲಿ ಎರಡಕ್ಕೂ ಸಮ ಪ್ರಮಾಣವನ್ನು ಕೊಟ್ಟಿದ್ದಾರೆ. ಈ ಕಲಾಕೃತಿಯಲ್ಲಿ ಗಿಡಮರಗಳು ನೈಜವಾಗಿ ಮೂಡಿಬಂದಿದೆ. ಗಾಢವಾದ ನೆರಳು ಬೆಳಕಿನ ವಿನ್ಯಾಸ ಮೂಡಿಬಂದಿದೆ.

**ಚಿತ್ರ ೨೯. ಕಬ್ಬನ್ ಪಾರ್ಕ್‌ನ ಬಣ್ಣಬಣ್ಣದ ಹೂವುಗಳು :** ಈ ಒಂದು ಚಿತ್ರಕಲಾಕೃತಿಯನ್ನು ರುಮಾಲೆ ಚನ್ನಬಸವಯ್ಯನವರು ಬೆಂಗಳೂರಿನ ಕಬ್ಬನ್ ಪಾರ್ಕ್‌ನ ಆವರಣದಲ್ಲಿ ಕುಳಿತು ಚಿತ್ರಿಸಿರುವ

ಕಲಾಕೃತಿಯಾಗಿದೆ. ಈ ಕಲಾಕೃತಿಯಲ್ಲಿ ಹೂವುಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಟ್ಟಿದ್ದಾರೆ. ಅವರು ಭೂಮಿಯ ತಳಭಾಗವನ್ನು ಬಿಟ್ಟು ಬರಿ ಹೂವುಗಳನ್ನು ಮಾತ್ರರ ಸೆರೆಹಿಡಿದ್ದಾರೆ. ಇಲ್ಲಿ ಎರಡು ರೀತಿಯ ಮರಗಳ ಹೂವುಗಳನ್ನು ಕಾಣಬಹುದು. ನೀಲಿ ಮತ್ತು ಕೇಸರಿ ಬಣ್ಣದ ಹೂವುಗಳು ಪ್ರಮುಖವಾಗಿ ಕಾಣುತ್ತೇವೆ. ಇಲ್ಲಿ ರುಮಾಲೆ ಅವರು ಪ್ರತಿಯೊಂದು ಹೂವನ್ನು ತುಂಬ ಜಾಗರೂಕತೆ ಯಿಂದ ಹಾಗೂ ತಾಳ್ಮೆಯಿಂದ ರಚಿಸಿರುವುದು ಕಂಡುಬರುತ್ತದೆ. ಹೂವುಗಳ ನೆರಳು ಬೆಳಕಿನ ಸ್ಪಷ್ಟತೆ, ವರ್ಣಗಳ ವಿನ್ಯಾಸ ಬಹಳ ಸ್ಪಷ್ಟವಾಗಿ ಮೂಡಿಬಂದಿದೆ. ಈ ಕಲಾಕೃತಿಯು ಜಲವರ್ಣಗಳ ಶ್ರೀಮಂತಿಕೆಯು ಎದ್ದು ಕಾಣುವಂತೆ ಮಾಡಿದ್ದಾರೆ ಹಿನ್ನೆಲೆಯಲ್ಲಿ ನೀಲಿ ಲೇಪನವಿದೆ.

**ಚಿತ್ರ ೩೦. ಗಾಂಧೀನಗರದ ಪೆಟ್ರೋಲ್‌ಬಂಕ್ :** ಈ ಚಿತ್ರ ಕಲಾಕೃತಿಯನ್ನು ರುಮಾಲೆಯವರು ೧೯೬೩ರಲ್ಲಿ ರಚಿಸಿದ ಅದ್ಭುತ ಕಲಾಕೃತಿಗಳಲ್ಲಿ ಒಂದಾಗಿದೆ. ಇಲ್ಲಿ ಪೆಟ್ರೋಲ್ ಬಂಕ್‌ನ ಕೊಠಡಿಯನ್ನು ಬಹಳ ನಾಜುಕಾಗಿ ಜಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಪೆಟ್ರೋಲ್ ಬಂಕ್‌ನ ಒಳಭಾಗದಲ್ಲಿ ಕಾಣುವಂತಹ ವಸ್ತುಗಳನ್ನು ಪಾರದರ್ಶಕವಾಗಿ ನೈಜತೆಯಿಂದ ಅವರ ಬುದ್ಧಿಯನ್ನು ಉಪಗಿಸಿ, ಚಿತ್ರರಚನೆ ಮಾಡಿದ್ದಾರೆ. ಆ ಕೊಠಡಿಯ ಬಲಬದಿಯಲ್ಲಿ ಸಮವಸ್ತ್ರವನ್ನು ಧರಿಸಿ ವ್ಯಕ್ತಿಯೊಬ್ಬ ನಿಂತಿದ್ದಾನೆ. ಮತ್ತು ಕೊಠಡಿಯ ಎಡಬದಿಯಲ್ಲಿ ಪೆಟ್ರೋಲ್ ತುಂಬಿ ಸಾಗಿಸುವಂತ ಟ್ಯಾಂಕರ್‌ಗಳು ಸಾಲಾಗಿ ನಿಲ್ಲಿಸಿದ್ದಾರೆ. ಅದರ ಪಕ್ಕದಲ್ಲಿಯೇ ಮಹಿಳೆ ಚಿತ್ರವನ್ನು ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ. ಮತ್ತು ಕೃತಿಯ ಎಡ ಭಾಗದಲ್ಲಿ ದೊಡ್ಡ ಮರವನ್ನು ತೋರಿಸಿದ್ದಾರೆ. ಕೊಠಡಿಯ ಪಕ್ಕದಲ್ಲಿ ಕಂಪೌಡನ್ನು ತೋರಿಸಿ ಅದರ ಹಿಂಬದಿಯಲ್ಲಿ ಗಿಡಮರಗಳ ಸಾಲನ್ನೆ ತೋರಿಸಿದ್ದಾರೆ. ಈ ಕಲಾಕೃತಿಯಲ್ಲಿ ಯಥಾರ್ದರ್ಶನ ಸ್ಪಷ್ಟವಾಗಿ ಮೂಡಿ ಬಂದಿದ್ದು, ವರ್ಣಗಳ ವಿನ್ಯಾಸ ಬಹಳ ಸೊಗಸಾಗಿದೆ.

**ಚಿತ್ರ ೩೧. ಪ್ರಕೃತಿಯ ಒಂದು ನೋಟ :** ಈ ಚಿತ್ರ ಕಲಾಕೃತಿಯು ಜಲವರ್ಣ ಮಾಧ್ಯಮದಲ್ಲಿ ನೈಜತೆಯಿಂದ ರಚಿತವಾಗಿರುವ ರುಮಾಲೆ ಅವರ ಪ್ರಕೃತಿ ಚಿತ್ರ. ಇದರಲ್ಲಿ ಹಳೆಯ ಕಾಲದ ಕೋಟೆಯ ಹೆಬ್ಬಾಗಿಲಿನಂತೆ ಎರಡು ದ್ವಾರಗಳನ್ನು ಕಾಣಬಹುದು. ಅದರ ಎಡಬದಿಲ್ಲೇ ಒಂದೆರಡು ಮನೆಗಳನ್ನು ತೋರಿಸಿದ್ದಾರೆ. ಆ ಎರಡು ದ್ವಾರಗಳ ಮುಂಭಾಗದಲ್ಲಿ ಜುಳುಜುಳನೆ ನೀರು ಹರಿಯುತ್ತಿದೆ. ಹಿಂಬದಿಯಲ್ಲಿ ದಟ್ಟವಾದ ಮರಗಳನ್ನು ತೋರಿಸಿದ್ದಾರೆ. ಇಲ್ಲಿ ನೆರಳು ಮತ್ತು ಬೆಳಕನ್ನು ಬಹಳ ಜಾಗರೂಕತೆಯಿಂದ ತೋರಿಸಿದ್ದಾರೆ. ಕಲಾವಿದ ರುಮಾಲೆ ಅವರು ಹಳೆಯ ಕಲಾದ ಕೋಟೆಯ ಹೆಬ್ಬಾಗಿಲಿಗೆ ಪ್ರಾಮುಖ್ಯತೆಯನ್ನು ಕೊಟ್ಟಿರುವಂತೆ ತೋರುತ್ತದೆ.

**ಚಿತ್ರಿ ೩೨. ಪ್ರಕೃತಿಯ ಒಂದು ನೋಟ :** ಈ ಚಿತ್ರ ಕಲಾಕೃತಿಯನ್ನು ರುಮಾಲೆಯವರು ೧೯೫೦ರಲ್ಲಿ ರಚಿಸಿರುವ ಪ್ರಕೃತಿಯ ಚಿತ್ರವನ್ನು ಜಲವರ್ಣದಲ್ಲಿ ನೈಜ ರೀತಿಯಲ್ಲಿ ಮೂಡಿ ಬಂದಿದೆ. ನೀರು ಮತ್ತು ಮರಗಳಲ್ಲಿ ತೆಳವಾದ ವರ್ಣಗಳು, ಕಲಾಕೃತಿಯಲ್ಲಿ ಅಲ್ಪ ಪ್ರಮಾಣದ ನೆರಳು

ಬೆಳಕನ್ನು ತೋರಿಸಿ ಕಲಾಕೃತಿಗೆ ಮೆರಗು ನೀಡಿದ್ದಾರೆ. ಈ ಕಲಾಕೃತಿಯಲ್ಲಿ ಕಲ್ಯಾಣಿಯಂತಿರುವ ನೀರಿನಿಂದ ತುಂಬಿದ ಹೊಂಡ ಅದನ್ನು ಪಾರದರ್ಶಕವಾಗಿ ಚಿತ್ರಿಸಿದ್ದಾರೆ. ಎಡಬದಿಯಲ್ಲಿ ವೃತ್ತಾಕಾರದಲ್ಲಿ ಗರಿಕೆಯ ಹುಲ್ಲು ಅದರ ಪ್ರತಿಬಿಂಬ ನೀರಿನಲ್ಲಿ ಹಾಗೂ ಅದರ ಹಿಂಬದಿಯಲ್ಲಿಯೇ ಅಗಲವಾಗಿ ಅರಳಿರುವ ಗಿಡಗಳು, ದಡದ ಸುತ್ತಲು ಗಿಡಮರಗಳನ್ನು ತೋರಿಸಿದ್ದಾರೆ. ಹಿಂಭಾಗದಲ್ಲಿ ವಿಶಿಷ್ಟವಾದ ಮೈವಳಿಕೆ ಯಿಂದ ಆಕಾಶವನ್ನು ತೋರಿಸಿದ್ದಾರೆ.

**ಚಿತ್ರ ೩೩. ಭಾಷ್ಯಂ ವೃತ್ತ ರಾಜಾಜಿನಗರ :** ಈ ಒಂದು ಚಿತ್ರಕಲಾಕೃತಿಯನ್ನು ತುಂಬಾ ವಿಶಿಷ್ಟವಾದ ರೀತಿಯಲ್ಲಿ ರಚನೆ ಮಾಡಿದ್ದಾರೆ. ಅವರ ಪ್ರಕೃತಿಯ ಕಲಾಕೃತಿಗಳಲ್ಲಿ ಹೆಚ್ಚು ಪ್ರಮಾಣ ಗಿಡಮರ, ಬಳ್ಳಿ, ನೀರು, ಪುಷ್ಪಗಳನ್ನೇ ಬಳಸಿಕೊಂಡು ಚಿತ್ರಣ ಮಾಡಿದ್ದಾರೆ. ಅದರಲ್ಲಿ ಎರಡು ಮನೆ ಮತ್ತು ಒಂದೆರಡು ಹೂಬಳ್ಳಿಗಳನ್ನು ಮಾತ್ರ ಅವರ ಕಲಾಕೃತಿಯಲ್ಲಿ ತೋರಿಸಿರುವುದು ತುಂಬಾ ವಿಶಿಷ್ಟ. ಈ ಕಲಾಕೃತಿಯಲ್ಲಿ ಎಡಬದಿಯ ಮನೆಯ ಗೋಡೆಯ ತುಂಬಾ ವಿಶೇಷವಾಗಿ ಕಾಣುತ್ತದೆ. ಒಂದು ರೀತಿಯಲ್ಲಿ ವಾರ್ಲಿಪೆಂಟಿಗ್ ರೀತಿಯಲ್ಲಿ ಕಾಣುತ್ತದೆ. ಆ ಗೋಡೆಗೆ ಅಂಟಿಸಿರುವ ಚೌಕ, ಆಯತ, ತ್ರಿಭುಜ ಇತ್ಯಾದಿ ರೀತಿಯಲ್ಲಿ ಇರುವ ಚಿಕ್ಕಚಿಕ್ಕ ಟೈಲ್ಸ್‌ಕಲ್ಲನ್ನು ನಿಜವಾಗಿಯೆ ಕಲಾಕೃತಿಯ ಮೇಲೆ ಅಂಟಿಸಿದ್ದಾರೆ ಎಂಬಂತೆ ವಿಶೇಷವಾಗಿ ಚಿತ್ರರಚನೆ ಮಾಡಿದ್ದಾರೆ. ಅದೇ ಮನೆಗೆ ಅಂಟಿಕೊಂಡು ಬೆಳೆದಿರುವ ಕೆಂಪು ಬಣ್ಣದ ಹೂಬಳ್ಳಿಯು ಆ ಮನೆಯ ಗೋಡೆಯನ್ನು ಅಲಂಕರಿಸುವಂತೆ ಪೂರಕವಾಗಿದೆ. ಆದರೆ ಬಲಬದಿಯಲ್ಲಿರುವ ಮನೆಯನ್ನು ಸಾಧಾರಣವಾಗಿ ತೋರಿಸಿದ್ದಾರೆ. ಹಿಂಬದಿಗೆ ನೀಲಿ ಬಣ್ಣವನ್ನು ಲೇಪಿಸಿದ್ದಾರೆ.

**ಚಿತ್ರ ೩೪. ಲಾರ್ಡ್‌ಕಬ್ಬನ್ ಪಾರ್ಕ್ :** ಈ ಒಂದು ಚಿತ್ರ ಕಲಾಕೃತಿಯನ್ನು ಮೇಲಿನ ಚಿತ್ರಣದಂತೆ ತುಂಬಾ ವಿಶೇಷವಾಗಿ ಚಿತ್ರಿಸಿದ್ದಾರೆ. ಪ್ರಕೃತಿಯ ಮಧ್ಯದಲ್ಲಿ ಪ್ರತಿಷ್ಠಿತ ವ್ಯಕ್ತಿಯ ಪುತಳಿಯನ್ನು ನಿಲ್ಲಿಸಿದ್ದಾರೆ. ಆ ವ್ಯಕ್ತಿಯು ಪಾಶ್ಚತ್ಯ ದೇಶದವನಂತೆ ವಸ್ತ್ರವನ್ನು ತೊಟ್ಟಿದ್ದಾನೆ. ಅವನ ಎರಡು ಕೈಯನ್ನು ಸೊಂಟದ ಮೇಲೆ ಇಟ್ಟುಕೊಂಡು ಅವನ ಎಡಗಾಲನ್ನು ಸ್ವಲ್ಪ ಮುಂದಕ್ಕೆ ಚಾಚಿಕೊಂಡು ನಿಂತಿದ್ದಾರೆ. ಅವನ ಎರಡು ಬದಿಯಲ್ಲು ಪಾದದವರೆಗೆ ವಸ್ತ್ರವು ವಿಶಿಷ್ಟವಾದ ನೆರಿಗೆಯ ರೀತಿಯಲ್ಲಿ ಬಿದ್ದಿದೆ. ಅವನ ಹಿಂಬದಿಯಲ್ಲಿ ಅರಳಿ ನಿಂತಿರುವ ಫಲಪುಷ್ಪಗಳು ಆ ವ್ಯಕ್ತಿಯನ್ನು ಸ್ವಾಗತಿಸುವಂತೆ ಕಾಣುತ್ತವೆ. ಎಲೆ ಮತ್ತು ಹೂಗಳನ್ನು ಬಿಡಿಬಿಡಿಯಾಗಿ ಪ್ರತಿ ಎಲೆಗಳನ್ನು ನಿರ್ದಿಷ್ಟವಾಗಿ ಚಿತ್ರಿಸಿದ್ದಾರೆ. ನೆರಳು-ಬೆಳಕನ್ನು ಯತಾರ್ಥವಾಗಿ ತೋರಿಸಿದ್ದಾರೆ. ಇಲ್ಲಿ ಬಿಳಿಯ ಬಣ್ಣವನ್ನು ಮಿಶ್ರಣಕ್ಕೆ ಬಳಸಿ ಕೊಂಡಿದ್ದಾರೆ. ಈ ಕಲಾಕೃತಿಯು ನೋಡುವ ಸಹೃದಯನಿಗೆ ಆನಂದವನ್ನುಂಟು ಮಾಡುವಂತೆ ಕಾಣುತ್ತದೆ.

**ಚಿತ್ರ ೩೫. ಪಂಪಾ ಸರೋವರ :** ಈ ಚಿತ್ರ ಕಲಾಕೃತಿಯನ್ನು ರುಮಾಲೆ ಚನ್ನಬಸವಯ್ಯನವರು ವಿರುಪಾಕ್ಷನ ಸನ್ನಿದಿಗೆ ಬಂದು ಸ್ವಾಮಿಯ ಆಶೀರ್ವಾದವನ್ನು ಪಡೆದು ಇಲ್ಲಿಯ ಪಂಪಾ ಸರೋವರದ

ಕಲಾಕೃತಿಯನ್ನು ಛಾಯ ಚಿತ್ರವನ್ನೆ ಮೀರಿಸುವಂತೆ ನೈಜರೀತಿಯಲ್ಲಿ ಚಿತ್ರಿಸಿದ್ದಾರೆ. ನೀರಿನ ದಡದಲ್ಲಿರುವ ಚಿಕ್ಕಚಿಕ್ಕ ಕಲ್ಲಿನ ಗುಂಡುಗಳನ್ನು ಯತವತ್ತಾಗಿ ತದ್ರೂಪದಂತೆ ಚಿತ್ರಿಸಿದ್ದಾರೆ. ನೀರಿನಲ್ಲಿ ಅದರ ಪ್ರತಿಬಿಂಬವನ್ನು ಗಮನಿಸಿದರೆ ನಾವೇ ನಿಜವಾಗಿ ಪಂಪಾ ಸರೋವರದಲ್ಲಿ ನಿಂದು ನೋಡುತ್ತಿದ್ದೇವೆ ಎಂದು ಭಾಸವಾಗುವಂತೆ ಚಿತ್ರರಚನೆ ಮಾಡಿದ್ದಾರೆ. ಈ ಕಲಾಕೃತಿಯನ್ನು ರಚಿಸಲು ತುಂಬಾ ಸಮಯ ಬೇಕಾಗಿದೆ ಅನಿಸುತ್ತದೆ. ಆ ಕಲ್ಲುಬಂಡೆಗಳ ನಡುವೆ ಬೆಳೆದ ನಿಂತಿರು ಎಲೆ ಬಳ್ಳಿಗಳನ್ನು ಸ್ಪಷ್ಟವಾಗಿ ಸೆರೆಹಿಡಿದಿದ್ದಾರೆ. ನೀರಿನ ಮುಂದಿನ ದಡದಲ್ಲಿ ಹಸಿರು ಹುಲ್ಲಿನ ವಿನ್ಯಾಸವಿದ್ದು ನೆರಳು ಬೆಳಕಿನ ವಿನ್ಯಾಸವನ್ನು ಸ್ಪಷ್ಟವಾಗಿ ಸೆರೆಹಿಡಿದಿದ್ದಾರೆ. ನೋಡುವ ಕಲಾ ಸಹೃದಯನಿಗೆ ನಿಜವಾಗಿಯೂ ಪಂಪಾ ಸರೋವರದಲ್ಲೆ ನಿಂತು ನೋಡುತ್ತೇನೆ ಎಂಬಂತೆ ರುಮಾಲೆ ಅವರು ಈ ಪ್ರಕೃತಿಯ ಚಿತ್ರಣವನ್ನು ಸೆರೆಹಿಡಿದಿದ್ದಾರೆ.

**ಚಿತ್ರ ೩೬. ಪ್ರಕೃತಿ ಒಂದು ನೋಟ :** ರುಮಾಲೆ ಚನ್ನಬಸವಯ್ಯನವರು ಈ ಒಂದು ಚಿತ್ರಕಲಾ ಕೃತಿಯನ್ನು ಜಲವರ್ಣದಲ್ಲಿ ಅತ್ಯುತ್ತಮವಾಗಿ ಚಿತ್ರಿಸಿದ್ದಾರೆ. ಬಣ್ಣಗಳ ಪಾರದರ್ಶಕತೇ ವಸ್ತುಗಳ ಗುಣ ಧರ್ಮಕ್ಕೆ ಮೆರಗು ತಂದಿದೆ. ಈ ಕಲಾಕೃತಿಯಲ್ಲಿ ನೀರು ತುಂಬಿದ ಹೊಳೆಯಿದೆ. ಆದರೆ ದಡದಲ್ಲೇ ಎರಡು ಹೆಂಚಿನ ಮನೆಗಳಿವೆ. ಆ ಮನೆಯನ್ನು ಗಮನಿಸಿದರೆ ಅತಿಥಿಗೃಹವಿರಬಹುದೆಂದು ಕಾಣುತ್ತದೆ. ಆ ಮನೆಯ ಮುಂಭಾಗದಲ್ಲಿ ಒಂದು ಕೆಂಪುಬಣ್ಣದ ಪುಟ್ಟ ಹೂವಿನ ಗಿಡವಿದೆ. ಹಿನ್ನೆಲೆಯಲ್ಲಿ ತೆಂಗಿನ ಮರಗಳ ತೊಟವಿರುವಂತೆ ಅನುಭವವಾಗುತ್ತದೆ. ಅಷ್ಟೊಂದು ಸ್ಪಷ್ಟ ಅನಿಸುವುದಿಲ್ಲ. ನೀರಿನ ದಡದ ಮೇಲಿರುವ ಮರಗಳಲ್ಲಿ ಹೆಂಚಿನ ಮನೆಗಳಲ್ಲಿ ಬಳಸಿದ ಬಣ್ಣಗಳ ಪ್ರತಿಬಿಂಬವು ನೀರಿನಲ್ಲಿ ತೋರಿಸಿದ್ದಾರೆ. ಇಲ್ಲಿ ಬಿಳಿಯ ಬಣ್ಣವನ್ನು ಸಾಂದರ್ಭಿಕವಾಗಿ ಮಿಶ್ರಣದೊಂದಿಗೆ ಬಳಸಿಕೊಂಡಿದ್ದಾರೆ. ಒಟ್ಟಿನಲ್ಲಿ ನೋಡುಗರಿಗೆ ಆನಂದವನ್ನುಂಟು ಮಾಡುವಂತೆ ರುಮಲೆ ಅವರು ಈ ಪ್ರಕೃತಿ ಚಿತ್ರಣವನ್ನು ಚಿತ್ರಿಸಿದ್ದಾರೆ.

**ಚಿತ್ರ ೩೭. ನೀರಿನಲ್ಲಿ ಮರದ ಪ್ರತಿಬಿಂಬ ಹಂಪಿ :** ರುಮಾಲೆ ಚನ್ನಬಸವಯ್ಯನವರು ನೀರಿನ ದಡದಲ್ಲಿರುವ ಮರವನ್ನು ನೀರಿನಲ್ಲಿ ಅದರ ಪ್ರತಿಬಿಂಬ ಕಾಣುವಂತೆ ಜಲವರ್ಣ ಮಾಧ್ಯಮದಲ್ಲಿ ರಚಿಸಿದ್ದಾರೆ. ಈ ಕಲಾಕೃತಿಯಲ್ಲಿ ಯಥಾದರ್ಶನ ಸ್ಪಷ್ಟವಾಗಿ ಮೂಡಿಬಂದಿದ್ದು ವರ್ಣಗಳ ವಿನ್ಯಾಸ ಇಲ್ಲಿ ಸ್ಪಷ್ಟವಾಗಿ ಮೂಡಿಬಂದಿದೆ. ನೀರಿನ ದಡದ ಮೇಲೆ ದೊಡ್ಡ ಮರವೊಂದು ಬೆಳೆದುನಿಂತಿದೆ. ಆ ಮರದ ಹಿನ್ನೆಲೆಯಲ್ಲಿ ದೂರಕ್ಕೆ ಬೆಟ್ಟಗುಡ್ಡಗಳಿವೆ. ಮತ್ತು ದೂರದ ಮಧ್ಯಭಾಗದಲ್ಲಿ ಕಲ್ಲಿನಿಂದ ಕಟ್ಟಿದ ಗೋಡೆಯೂ ಅರ್ಧಭಾಗಕ್ಕೆ ಬಿದ್ದು ಹಾಳಾಗಿರುವಂತೆ ತೋರುತ್ತದೆ. ಆ ಮರದ ಮುಂಭಾಗದಲ್ಲಿ ಹರಿಯುವ ನೀರಲ್ಲಿ ಮರದ ಪ್ರತಿಬಿಂಬವು ಕಾಣುತ್ತದೆ. ಆ ಕಲಾಕೃತಿಯಲ್ಲಿ ಗಾಢವಾದ ನೆರಳು ಬೆಳಕು ಇದ್ದು ಹಿನ್ನೆಲೆಯಲ್ಲಿ ಬೆಳಕಿನ ಸಾಂದ್ರತೆಯನ್ನು ತೋರಿಸಿದ್ದಾರೆ. ಈ ಕಲಾಕೃತಿಯನ್ನು ಗಮನಿಸದಾಗ ರುಮಾಲೆಯವರ ದೃಷ್ಟಿಕೋನ ಹೇಗೆ ಭಿನ್ನವಾಗಿತ್ತು ಎಂಬುದು ತಿಳಿದುಬರುತ್ತದೆ.

**ಚಿತ್ರ ೩೮. ಪ್ರಕೃತಿಯ ಒಂದು ನೋಟ :** ರುಮಾಲೆ ಅವರು ಈ ಚಿತ್ರದಲ್ಲಿ ಮೂರು ರೀತಿಯ ಮರಗಳನ್ನು ಬಳಸಿಕೊಂಡಿದ್ದಾರೆ. ಹಸಿರು ಬಣ್ಣದ ಗಿಡಗಳಲ್ಲಿ ತುತ್ತತುದಿಯಲ್ಲಿ ಎರಡು ಟೊಂಗೆಗಳು ಮೇಲೆ ಎದ್ದಿವೆ. ಎರಡನೆಯದು ಅದಕ್ಕಿಂತ ದೊಡ್ಡ ಮರವಾಗಿದೆ. ಆದರೆ ಇಲ್ಲಿ ಮಾಗಿಬೀಳುವ ಎಲೆಗಳನ್ನು ಹೊಂದಿರುವ ಮರವನ್ನು ತೋರಿಸಿದ್ದಾರೆ. ಮೂರನೆಯ ಮರವು ಎಲ್ಲಾ ಎಲೆಗಳು ಕೆಳಗೆ ಬಿದ್ದು ಬರಿ ಒಣಗಿದ ಟೊಂಗೆಗಳು ಮಾತ್ರ ಉಳಿದಿವೆ. ಇಲ್ಲಿ ರುಮಾಲೆ ಅವರು ರಚಿಸಿದ ಕಲಾಕೃತಿಯನ್ನು ನಾವು ಸೂಕ್ಷ್ಮವಾಗಿ ಗಮನಿಸಿ ಆಲೋಚಿಸಿದಾಗ, ಪ್ರಪಂಚದಲ್ಲಿ ಪ್ರತಿಯೊಬ್ಬ ಮನುಷ್ಯನಿಗೂ ಮೂರು ಹಂತಗಳಿರುತ್ತವೆ, ಬಾಲಕನಿಂದ ಪ್ರಬುದ್ಧಮಾನಕ್ಕೆ ಬಂದು ನಿಂತಾಗ ಏನನ್ನಾದರೂ ನಾನು ಸಾಧಿಸೇ ತೀರುತ್ತೇನೆ ಎಂಬ ಹುಮ್ಮಸ್ಸು, ಎರಡನೆಯ ಹಂತದಲ್ಲಿ ಹಿಂದಿನ ದಿನಗಳಲ್ಲಿ ಇದ್ದ ಆ ಹುಮ್ಮಸ್ಸು ಕಡಿಮೆಯಾಗುತ್ತಾ ಬರುತ್ತದೆ. ಹಿಂದೆ ಇದ್ದ ಅಟ, ಚಲ, ತೇಜಸ್ಸು ಕಡಿಮೆಯಾಗುತ್ತಾ ಬರುತ್ತದೆ. ಮೂರನೆಯ ಹಂತದಲ್ಲಿ ಏನನ್ನು ಮಾಡಲು ಆಗದ ನಿಸ್ಸಹಾಯಕನಾಗಿ ಬಿಡುತ್ತಾನೆ. ಈ ರೀತಿಯ ಜೀವನದ ಇತಿಹಾಸವನ್ನು ಹೇಳುವಂತೆ ಅದ್ಭುತವಾದ ಕಲಾಕೃತಿಯನ್ನು ರುಮಾಲೆ ಚನ್ನಬಸವಯ್ಯನವರು ರಚಿಸಿದ್ದಾರೆ.

**ಚಿತ್ರ ೩೯. ಬೆಂಗಳೂರಿನ ರಸ್ತೆಬದಿ :** ಈ ಚಿತ್ರ ಕಲಾಕೃತಿಯನ್ನು ರುಮಾಲೆ ಅವರು ೧೯೮೩ರಲ್ಲಿ ರಚಿಸಿರುವ ಜಲವರ್ಣದ ಕಲಾಕೃತಿಯಿದು. ಈ ಕಲಾಕೃತಿಯಲ್ಲಿ ಸೇತುವೆಯ ಕೆಳಭಾಗದಲ್ಲಿ ಮರಗಳ ಸಾಲುಗಳಿವೆ ಹಾಗೂ ಕೆಳಭಾಗದಲ್ಲಿ ಹೆಂಚಿನ ಮನೆಗಳು ಮತ್ತು ಮಹಡಿಯ ಮನೆಗಳು ಒಟ್ಟಿಗೆ ಮಿಶ್ರಣವಾಗಿವೆ. ಅದರ ಹಿನ್ನೆಲೆಯಲ್ಲಿ ತಿಳಿನೀಲಿ ಬಣ್ಣವನ್ನು ಲೇಪಿಸಿದ್ದಾರೆ. ಈ ಕಲಾಕೃತಿಯು ನೋಡುಗರಿಗೆ ಮುದ ನೀಡುವಂತೆ ತೋರುತ್ತದೆ.

**ಚಿತ್ರ ೪೦. ಪ್ರಕೃತಿಯದೃಶ್ಯ :** ಈ ಚಿತ್ರ ಕಲಾಕೃತಿಯಲ್ಲಿ ರುಮಾಲೆ ಅವರು ಸಿಮೆಂಟ್‌ನಿಂದ ಕಟ್ಟಿದ ಮನೆಯನ್ನು ತುಂಬಾ ನೈಜರೂಪದಲ್ಲಿ ಚಿತ್ರಿಸಿ ಅದರಲ್ಲಿ ನಾಲ್ಕು ಸಣ್ಣ ಕಿಟಕಿಗಳನ್ನು ಬರೆದಿದ್ದಾರೆ. ಅದರ ಪಕ್ಕದಲ್ಲಿಯೇ ಗೇಟಿಗೆ ಹೊಂದಿಕೊಂಡು ದೊಡ್ಡಮರಗಳು ಬೆಳೆದುನಿಂತಿವೆ. ಅದರಲ್ಲಿ ಮರದ ಎಲೆಗಳನ್ನು ಬಿಳಿಯ ಬಣ್ಣದಿಂದ ಮಿಶ್ರಣಮಾಡಿ ಎಲೆಗಳಿಗೆ ಸ್ಪಷ್ಟತೆಯನ್ನು ಕೊಟ್ಟಿದ್ದಾರೆ. ಇಲ್ಲಿ ಹಸಿರು, ಹಳದಿ, ಕೆಂಪು ಮೂಲ ಬಣ್ಣಗಳಾಗಿ ಕಾಣುತ್ತವೆ. ಈ ದೃಶ್ಯ ನೋಡುವ ಸಹೃದಯದವರಿಗೆ ಆಕರ್ಷಕವಾಗಿ ಕಾಣುತ್ತದೆ.

**ಚಿತ್ರ ೪೧. ರಾಜಾಜಿ ನಗರದ ಮನೆಯ ಒಂದು ನೋಟ :** ರುಮಾಲೆ ಅವರು ಈ ಚಿತ್ರ ಕಲಾಕೃತಿಯನ್ನು ೧೯೭೭ರಲ್ಲಿ ರಚಿಸಿದಂತ ಕೃತಿಯಾಗಿದೆ. ಈ ಕಲಾಕೃತಿಯಲ್ಲಿ ಮನೆಯ ಮುಂದಿನ ಗೇಟ್ ಸ್ಪಷ್ಟವಾಗಿ ಕಾಣುತ್ತದೆ. ಆದರೆ ಮನೆಯ ಆವರಣದಲ್ಲಿ ಬೆಳೆದು ನಿಂತಿರು ಗಿಡಮರಗಳು ದಟ್ಟವಾಗಿ ಬೆಳೆದು ಮನೆಯನ್ನು ಆವರಿಸಿಕೊಂಡಿವೆ. ಮನೆಯ ಮಹಡಿಯ ಮೇಲೆಹೋಗಲು ಮೆಟ್ಟಿಲಿನ

ಕಂಬಿ ಮಾತ್ರ ಕಾಣಿಸುತ್ತಿದೆ. ಇಲ್ಲಿ ರುಮಾಲೆ ಅವರು ಜಲವರ್ಣದಲ್ಲಿಯೆ (ವಪೆಕ್) ಶೈಲಿಯಲ್ಲಿ ತುಂಬಾ ನೈಜ ರೀತಿಯಲ್ಲಿ ಮರದ ಎಲೆಗಳನ್ನು ತೋರಿಸಿದ್ದಾರೆ. ಅದನ್ನು ನೋಡಿದರೆ ನಾವು ನಿಜವಾಗಿ ಆ ಮನೆಯ ಮುಂದೆಹೋಗಿ ನಿಂತು ನೋಡುತ್ತೇವೆ ಎಂಬಂತೆ ಅನಿಸುತ್ತದೆ. ಇಲ್ಲಿ ಬಿಳಿಬಣ್ಣಗಳನ್ನು ಹೇರಳವಾಗಿ ಬಳಸಿಕೊಂಡಿದ್ದಾರೆ. ಈ ಕಲಾಕೃತಿಯು ನೋಡುಗರಿಗೆ ಆಕರ್ಷಕವಾಗಿದೆ.

**ಚಿತ್ರ ೪೨. ರಾಜಭವನದ ಹತ್ತಿರದ ಗೊಲ್ಮೊಹರ್‌ನ ಚಿತ್ರ :** ಈ ಕಲಾಕೃತಿಯನ್ನು ರುಮಾಲೆ ಅವರು ರಾಜಭವನದ ಪಾರ್ಕ್‌ವೊಂದರಲ್ಲಿ ಚಿತ್ರಿಸಿದ್ದಾರೆ. ಚಿತ್ರದ ಮುಂಭಾಗದಲ್ಲಿ ಅಲಂಕಾರಿಕ ಹೂಬಳ್ಳಿಗಳನ್ನು ತೋರಿಸಿ ಅದರ ಹಿಂಬದಿಯಲ್ಲಿ ಗೊಲ್ಮೊಹರ್ ಹೂವಿನ ಮರವನ್ನು ಚಿತ್ರಿಸಿದ್ದಾರೆ. ಹಾಗೂ ಎಡ ಮತ್ತು ಬಲಭಾಗದಲ್ಲಿ ನೀಲಿಬಣ್ಣದ ಮರಗಳನ್ನು ತೋರಿಸಿದ್ದಾರೆ. ಹಿನ್ನೆಲೆಯಲ್ಲಿ ತಿಳಿನೀಲಿ ಬಣ್ಣವನ್ನು ಬಳಸಿಕೊಂಡು ವಿಶಿಷ್ಟವಾದ ಮೈವಳಿಕೆಯನ್ನು ತೋರಿಸಿದ್ದಾರೆ. ಈ ಕಲಾಕೃತಿಯು ನೋಡುಗರಿಗೆ ಮುದನೀಡುವಂತೆ ತೋರುತ್ತದೆ.

**ಚಿತ್ರ ೪೩. ಹೈಕೋರ್ಟ್ ಹತ್ತಿರದ ಹಳದಿ ಹೂವಿನ ಮರ :** ಈ ಕಲಾಕೃತಿಯನ್ನು ರುಮಾಲೆ ಅವರು ಜಲವರ್ಣದಲ್ಲಿ ಕ್ಯಾನವಾಸಿನಮೇಲೆ ನೈಜತೆಯಿಂದ ಚಿತ್ರಿಸಿದ್ದಾರೆ. ಈ ಕಲಾಕೃತಿಯ ಮುಂಭಾಗದಲ್ಲಿ ಹಳದಿ ಹೂವಿನ ಮರವನ್ನು ತೋರಿಸಿದ್ದಾರೆ. ಅದರ ಹಿಂಬದಿಯಲ್ಲೇ ನೀಲಿಬಣ್ಣದ ಮರವಿದೆ. ಅದರ ಹಿಂಬದಿಯಲ್ಲಿ ಕೆಂಪುಬಣ್ಣದ ಸಿಮೆಂಟ್ ಕಟ್ಟಡವು ಹಳೆ ಮಾದರಿಯ ಶೈಲಿಯಲ್ಲಿದೆ. ಆ ಕಟ್ಟಡದ ಮೂರು ಕಂಬಗಳು ಸ್ಪಷ್ಟವಾಗಿ ಕಾಣುತ್ತದೆ. ಈ ಕಲಾಕೃತಿಯು ನೋಡುಗರಿಗೆ ಆಕರ್ಷಣೆಯನ್ನುಂಟು ಮಾಡುತ್ತದೆ.

**ಚಿತ್ರ ೪೪. ಪ್ರಕೃತಿಯ ಒಂದು ನೋಟ :** ಈ ಒಂದು ಕಲಾಕೃತಿಯಲ್ಲಿ ಜಲವರ್ಣವನ್ನು ಎಲ್ಲಾ ಕಡೆಗಳಲ್ಲಿಯೂ ತಿಳಿಯಾಗಿಯೇ ಬಳಸಿಕೊಂಡಿದ್ದಾರೆ. ಈ ಕಲಾಕೃತಿಯ ಮುಂಭಾಗದಲ್ಲಿ ನೀರು ನಿಂತಿರುವ ಹಾಗೆ ಕಾಣುತ್ತದೆ. ಅದರ ಹಿಂಭಾಗದಲ್ಲಿ ಮನುಷ್ಯನ ಎದೆಮಟ್ಟದ ಸಿಮೆಂಟ್‌ಗೋಡೆ ಇದೆ. ಅದರ ಬಲಬದಿಯಲ್ಲಿ ಚಿಕ್ಕಗೇಟ್ ಇದೆ. ಅದರ ಪಕ್ಕದಲ್ಲಿ ಸಿಮೆಂಟ್‌ಕಟ್ಟಡದ ಮೇಲೆ ಚಿಕ್ಕದೊಂದು ಹೆಂಚಿನ ಗೂಡನ್ನು ಕಟ್ಟಿರುವುದನ್ನು ನೈಜ ರೀತಿಯಲ್ಲಿ ಚಿತ್ರಿಸಿದ್ದಾರೆ. ಹಿನ್ನೆಲೆಯಲ್ಲಿ ತಿಳಿಹಸಿರು ಹಳದಿ ಮತ್ತು ನೀಲಿಬಣ್ಣವನ್ನು ತೋರಿಸಿದ್ದಾರೆ. ಈ ಕಲಾಕೃತಿಯು ನೋಡುಗರಿಗೆ ಆನಂದವನ್ನುಂಟು ಮಾಡುತ್ತದೆ.

**ಚಿತ್ರ ೪೫. ಮನೆಯ ಆವರಣದಲ್ಲಿ ಹೂವಿನ ಮರಗಳು :** ಈ ಕಲಾಕೃತಿಯಲ್ಲಿ ನಾವು ಗಮನಿಸುವುದಾದರೆ, ಮನೆಯ ಆವರಣದ ಒಳಭಾಗದಲ್ಲಿ ನೀಲಿ ಮತ್ತು ಹಸಿರಿನ ಮರಗಳು ಬೆಳೆದು ನಿಂತಿವೆ. ಮರದ ಮುಂಭಾಗದಲ್ಲಿ ಸಿಮೆಂಟ್ ಗೇಟ್ ತೋರಿಸಿದ್ದಾರೆ. ಅದರ ಪಕ್ಕದಲ್ಲಿ ಒಂದು ರೂಂ

ನಂತೆ ಇರುವ ಕಟ್ಟಡವಿದೆ. ಅದರ ಎಡಬದಿಯಲ್ಲಿ ಮೇಲಕ್ಕೆ ಹೋಗುವ ಮೆಟ್ಟಿಲುಗಳನ್ನು ತೋರಿಸಿದ್ದಾರೆ. ಈ ಕಲಾಕೃತಿಯಲ್ಲಿ ನೀಲಿ, ಹಳದಿ, ಹಸಿರು ಬಣ್ಣಗಳನ್ನು ಬಳಸಿದ್ದಾರೆ. ಈ ಕಲಾಕೃತಿ ನೋಡುಗರಿಗೆ ಮುದುವನ್ನುಂಟು ಮಾಡುತ್ತದೆ.

**ಚಿತ್ರ ೪೬. ರಾಜಾಜಿನಗರದ ರಸ್ತೆ ಬದಿಯ ಒಂದು ದೃಶ್ಯ :** ರುಮಾಲೆ ಅವರು ಈ ಕಲಾಕೃತಿಯನ್ನು ಮನೆಯ ಮಹಡಿಯ ಮೇಲೆ ಕುಳಿತು ಚಿತ್ರಿಸಿರುವ ಕಲಾಕೃತಿಯಾಗಿದೆ. ಈ ಕಲಾಕೃತಿಯಲ್ಲಿ ಮನೆಯ ಮೇಲ್ಭಾಗದ ಪಟ್ಟಿಯೊಂದು ಮಾತ್ರ ಕಾಣಿಸುತ್ತದೆ. ಅದರ ಮುಂಭಾಗದಲ್ಲಿ ಕೇಸರಿಬಣ್ಣದ ಹೂವಿನ ಮರವೊಂದು ಎತ್ತರವಾಗಿ ಬೆಳೆದುನಿಂತಿದೆ. ಎಡಬದಿಯಲ್ಲಿ ನೀಲಿಬಣ್ಣದ ಮರವನ್ನು ಸ್ವಲ್ಪಪ್ರಮಾಣದಲ್ಲಿ ತೋರಿಸಿದ್ದಾರೆ. ಇಲ್ಲಿ ಕೇಂದ್ರಬಿಂದುವಾಗಿರುವ ಕೇಸರಿಬಣ್ಣದ ಹೂವಿನಮರಕ್ಕೆ ಬಿಳಿಬಣ್ಣವನ್ನು ಮಿಶ್ರಣದೊಂದಿಗೆ ಬಳಸಿಕೊಂಡು ಪೂರ್ಣಗೊಳಸಿದ್ದಾರೆ. ಈ ಕಲಾಕೃತಿಯು ನೋಡುಗರಿಗೆ ಆಕರ್ಷಕವಾಗಿ ಕಾಣುತ್ತದೆ.

**ಚಿತ್ರ ೪೭. ಹೈಕೋರ್ಟ್‌ನ ಒಂದು ನೋಟ :** ರುಮಾಲೆ ಅವರು ಹೈಕೋರ್ಟ್‌ನ ಒಂದು ಬದಿಯಲ್ಲಿರುವ ಎರಡು ಹೂವಿನ ಮರಗಳನ್ನು ಅವರದೇ ಆದ ಶೈಲಿಯಲ್ಲಿ ಚಿತ್ರ ರಚನೆ ಮಾಡಿದ್ದಾರೆ. ಒಂದು ಹಳದಿಮರ ಮತ್ತೊಂದು ನೀಲಿಬಣ್ಣದ ಮರ. ಈ ಎರಡು ಮರಗಳು ಅಕ್ಕಪಕ್ಕದಲ್ಲೇ ಇರುವುದನ್ನು ಕಲಾಕೃತಿಯ ಮೂಲಕ ತೋರಿಸಿದ್ದಾರೆ. ಈ ಎರಡು ಮರಗಳ ಹಿಂಭಾಗದಲ್ಲಿ ಹೈಕೋರ್ಟ್ ಕಟ್ಟಡವಿದೆ. ಇಲ್ಲಿ ಹಳದಿಮರದ ಟೊಂಗೆಗಳಿಗೆ ಪ್ರಕಾಶಮಾನತೆಯನ್ನು ಕಂಡುಕೊಳ್ಳುವುದಕ್ಕಾಗಿ ಬಿಳಿಯ ಬಣ್ಣವನ್ನು ಬಳಸಿಕೊಂಡಿದ್ದಾರೆ. ಹಿನ್ನೆಲೆಯಲ್ಲಿ ತಿಳಿ ನೀಲಿಬಣ್ಣವನ್ನು ಲೇಪಿಸಿದ್ದಾರೆ. ಈ ಕಲಾಕೃತಿಯು ನೋಡುಗರಿಗೆ ಆನಂದವನ್ನುಂಟು ಮಾಡುತ್ತದೆ.

**ಚಿತ್ರ ೪೮. ಕೆ.ಆರ್. ಸರ್ಕಲ್ ಬೆಂಗಳೂರು :** ಈ ಚಿತ್ರ ಕಲಾಕೃತಿಯನ್ನು ರುಮಾಲೆ ಅವರು ೧೯೭೭ರಲ್ಲಿ ಅಂದಿನ ಕೆ.ಆರ್.ಸರ್ಕಲ್‌ನ ಗಿಡಮರಗಳನ್ನು ಅವರ ಕಲಾಕೃತಿಯ ಮೂಲಕ ತೋರಿಸಿದ್ದಾರೆ. ಈ ಕಲಾಕೃತಿಯಲ್ಲಿ ಯಥಾದರ್ಶನದ ನೈಜತೆಯನ್ನು ತೋರಿಸಿದ್ದಾರೆ. ಇಲ್ಲಿ ಅಲಂಕಾರಕ್ಕಾಗಿ ಬೆಳೆಸಿದ ಹೂವಿನಗಿಡಗಳನ್ನು ನೆರಳು-ಬೆಳಕಿನೊಂದಿಗೆ ಕಲಾ ಕೃತಿಯ ಮೂಲಕ ಸೆರೆಹಿಡಿದಿದ್ದಾರೆ. ಎಲೆಗಳ ಮಧ್ಯ ನೀಲಿಬಣ್ಣದ ಹೂವುಗಳನ್ನು ತೋರಿಸಿದ್ದಾರೆ. ಹಿನ್ನೆಲೆಯಲ್ಲಿ ಹಳದಿಬಣ್ಣವನ್ನು ದಟ್ಟವಾಗಿ ತೋರಿಸಿದ್ದಾರೆ. ಈ ಕಲಾಕೃತಿಯ ನೋಡುಗರಿಗೆ ಆಕರ್ಷಕವಾಗಿ ಕಾಣುತ್ತದೆ.

**ಚಿತ್ರ ೪೯. ಹೈಕೋರ್ಟ್ ಹಿಂಭಾಗ ಬೆಂಗಳೂರು :** ಈ ಚಿತ್ರ ಕಲಾಕೃತಿಯನ್ನು ರುಮಾಲೆ ಅವರು ಚಿತ್ರ ೪೭ರಂತೆ ಸ್ವಲ್ಪಮಟ್ಟಿಗೆ ಬದಲಾಗಿ ತೋರಿಸಿದ್ದಾರೆ. ೪೭ರ ಚಿತ್ರದಲ್ಲಿರುವಂತೆ ಹಳದಿ ಮತ್ತು ನೀಲಿಬಣ್ಣದ ಹೂವಿನ ಮರವನ್ನು ತೋರಿಸಿದ್ದಾರೆ. ಅದರಲ್ಲಿ ಎರಡು ಮರಗಳು ಸಮಪ್ರಮಾಣದಲ್ಲಿ ಕಂಡರೆ ಇಲ್ಲಿ ನೀಲಿಬಣ್ಣದ ಮರವೇ ಪ್ರಮುಖವೆನಿಸುತ್ತದೆ. ಅದರಲ್ಲಿ ಹೈಕೋರ್ಟ್ ಕಟ್ಟಡವು

ಒಂದೇ ಕಂಬದ ಸಾಲುಗಳಿವೆ. ಆದರೆ ಇದರಲ್ಲಿ ಮೂರುಮಹಡಿಯ ಕಂಬದ ಸಾಲುಗಳು ಕಂಡುಬರುತ್ತವೆ. ಅದರಲ್ಲಿ ಹಳದಿ ಮರಕ್ಕೆ ಬಿಳಿಯಬಣ್ಣವನ್ನು ಬಳಸಿದ್ದಾರೆ. ಆದರೆ ಇದರಲ್ಲಿ ಬಿಳಿಯಬಣ್ಣವನ್ನು ಬಳಸದೆ ಕಲಾಕೃತಿಯನ್ನು ಪೂರ್ಣಗೊಳಿಸಿದ್ದಾರೆ. ಈ ಕಲಾಕೃತಿಯನ್ನು ನೋಡುಗರಿಗೆ ತುಂಬಾ ಮುದುವನ್ನುಂಟು ಮಾಡುತ್ತದೆ.

**ಚಿತ್ರ ೫೦. ಬಾಲ ಭವನ ಹತ್ತಿರದ ಪಾರ್ಕ್ ದೃಶ್ಯ :** ರುಮಾಲೆ ಚಿನ್ನಬಸವಯ್ಯನವರು ಈ ಕಲಾಕೃತಿಯನ್ನು ೧೯೪೭ರಲ್ಲಿ ಜಲವರ್ಣ ಮಾಧ್ಯಮದಿಂದ ಚಿತ್ರಿಸಿರುವ ಕಲಾಕೃತಿಯಾಗಿದೆ. ಈ ಪಾರ್ಕ್‌ವೊಂದರಲ್ಲಿ ದಟ್ಟವಾದ, ಬೃಹದಾಕಾರವಾಗಿ ಬೆಳೆದಿರುವ ಮರಗಿಡಗಳು ಆ ಮರಗಳಲ್ಲಿ ಕೇಸರಿಬಣ್ಣದ ಹೂವುಗಳನ್ನು ನೈಜರೀತಿಯಲ್ಲಿ ತೋರಿಸಿದ್ದಾರೆ. ಬೆಳಕು ಮತ್ತು ನೆರಳನ್ನು ತುಂಬಾ ಸ್ಪಷ್ಟತೆಯಿಂದ ತೋರಿಸಿದ್ದಾರೆ. ಆ ದೊಡ್ಡದೊಡ್ಡ ಮರಗಳ ಕೆಳಭಾಗದಲ್ಲಿ ಕಪ್ಪನೆಯ ನೆರಳು ಆವರಿಸಿಕೊಂಡಿದೆ. ಮರದ ಕೆಳಭಾಗದಲ್ಲಿ ಹೂವುಗಳು ಕೆಳಗೆ ಬಿದ್ದಿರುವುದನ್ನು ಬಹಳ ಸ್ಪಷ್ಟವಾಗಿ ತೋರಿಸಿದ್ದಾರೆ. ಈ ಕಲಾಕೃತಿಯು ನೋಡುಗರಿಗೆ ತುಂಬಾ ಆನಂದವನ್ನುಂಟು ಮಾಡುತ್ತದೆ.

**ಚಿತ್ರ ೫೧. ಗೊಲ್ಮೊಹರ್ ಹೂವಿನ ಚಿತ್ರ :** ಈ ಒಂದು ಚಿತ್ರಕಲಾಕೃತಿಯನ್ನು ರುಮಾಲೆಯವರು ಜಲವರ್ಣದಲ್ಲಿ ವಪೆಕ್ (ದಟ್ಟತೆ) ಶೈಲಿಯಲ್ಲಿ ಕೃತಿರಚನೆ ಮಾಡಿರುವುದು ಕಂಡುಬರುತ್ತದೆ. ಈ ಕಲಾಕೃತಿಯಲ್ಲಿ ಹಳದಿ ಮತ್ತು ಕೆಂಪುಬಣ್ಣದ ಹೂಗಳನ್ನು ತುಂಬಾ ಖಚಿತತೆಯಿಂದ ಬಿಳಿಬಣ್ಣದ ಮಿಶ್ರಣದೊಂದಿಗೆ ತೋರಿಸಿದ್ದಾರೆ. ಎಡಬದಿಯಲ್ಲಿ ಹಸಿರು, ನೀಲಿಬಣ್ಣದ ಚಿಕ್ಕ ಗಿಡಗಳನ್ನು ತೋರಿಸಿದ್ದಾರೆ. ಈ ಕಲಾಕೃತಿಯು ನೋಡುಗರಿಗೆ ಬಹಳ ಆಕರ್ಷಕವಾಗಿ ಕಾಣುತ್ತದೆ.

**ಚಿತ್ರ ೫೨. ಹೈಕೋರ್ಟ್ ಹತ್ತಿರ ಒಂದು ದೃಶ್ಯ :** ರುಮಾಲೆ ಚನ್ನಬಸವಯ್ಯನವರು ಈ ಒಂದು ಕಲಾಕೃತಿಯನ್ನು ಹೈಕೋರ್ಟ್‌ನಿಂದ ದೂರದಲ್ಲಿ ಕುಳಿತು ಅದರ ಪೂರ್ವಭಾಗದ ಕಟ್ಟಡವನ್ನು ವಿಸ್ತಾರವಾಗಿ ಚಿತ್ರಿಸಿದ್ದಾರೆ. ಆ ಕಟ್ಟಡದ ಮುಂಭಾಗದಲ್ಲಿರುವ ಹಳದಿ ಮತ್ತು ನೀಲಿಯ ಮರಗಳನ್ನು, ನೆರಳು-ಬೆಳಕಿನೊಂದಿಗೆ ತೋರಿಸಿದ್ದಾರೆ. ಅದರ ಬಲಬದಿಯಲ್ಲಿ ಮತ್ತೊಂದು ನೀಲಿಬಣ್ಣದ ಹೂಬಳ್ಳಿ ಇದೆ. ಹೈಕೋರ್ಟ್ ಕಟ್ಟಡದ ಮುಂಭಾಗದಲ್ಲಿ ನೆಲದ ಮೇಲೆ ಬೆಳೆದಿರುವ ಗರಿಕೆಯನ್ನು ಸೊಗಸಾಗಿ ಚಿತ್ರಿಸಿದ್ದಾರೆ. ಹಾಗೂ ಬಲಬದಿಯಲ್ಲಿ ಹೈಕೋರ್ಟ್ ಕಟ್ಟಡದ ಮೇಲೆಕ್ಕೆ ಹೋಗಲು ಮೆಟ್ಟಿಲುಗಳನ್ನು ಬಹಳ ಅಂದವಾಗಿ ತೋರಸಿದ್ದಾರೆ. ಈ ಕಲಾಕೃತಿಯು ನೋಡುಗರಿಗೆ ತುಂಬಾ ಆಕರ್ಷಕವಾಗಿ ಕಾಣುತ್ತದೆ.

**ಚಿತ್ರ ೫೩. ಶ್ರೀ ಮಂಜುನಾಥನ ಲಿಂಗ :** ರುಮಾಲೆ ಚನ್ನಬಸವಯ್ಯನವರಿಗೆ ದೇವರ ಮೇಲೆ ಅಪಾರ ಭಕ್ತಿ ಆಧ್ಯಾತ್ಮದ ಕಡೆ ಒಲವು ಹೆಚ್ಚಿದ್ದರಿಂದ ಇವರ ಕಲಾಕೃತಿಗಳಲ್ಲಿ ದೇವರಿಗೆ ಸಂಬಂಧಿಸಿದ ಸಾಕಷ್ಟು ಕಲಾಕೃತಿಗಳನ್ನು ರಚಿಸಿದ್ದಾರೆ. ಅಲ್ಲದೆ ಶಿವಬಾಲಯೋಗಿಸ್ವಾಮಿ ಮತ್ತು ತಪಸ್ವಿಜಿ ಮಹರಾಜ್ ಶಿಷ್ಯನಾಗಿ ೮ ರಿಂದ ೧೦ ವರ್ಷಗಳ ಕಾಲ ಸೇವೆಸಲ್ಲಿಸಿದ್ದಾರೆ. ಹೀಗೆ ದೇವರ ಭಕ್ತಿಯಿಂದ

ಭಕ್ತಿಪೂರ್ವಕವಾದ ಮಂಜುನಾಥನ ಲಿಂಗವನ್ನು ಗರ್ಭಗುಡಿಯ ಒಳಭಾಗದಲ್ಲಿ ಚಿತ್ರಿಸಿದ್ದಾರೆ. ಲಿಂಗದ ಹಿಂಭಾಗದಲ್ಲಿ ಬಂಗಾರದ ಒಡವೆಗಳು ಇವೆ. ಇದನ್ನು ಹಳದಿ ಬಣ್ಣದಿಂದ ತೋರಿಸಿದ್ದಾರೆ. ಬಾಗಿಲಿನಲ್ಲಿ ಎರಡುಕಡೆ ನೀಲಿಬಣ್ಣದಲ್ಲಿ ಅಲಂಕಾರವಾಗಿ ಚಿತ್ರಿಸಿದ್ದಾರೆ. ಈ ಕಲಾಕೃತಿಯು ನೋಡುಗರಿಗೆ ಭಕ್ತಿಭಾವವನ್ನುಂಟು ಮಾಡುವಂತೆ ತೋರುತ್ತದೆ.

**ಚಿತ್ರ ೫೪. ಶಿವಲಿಂಗ ಮತ್ತು ಶಿವಬಾಲಯಾಗಿ ಸ್ವಾಮಿ :** ಈ ಒಂದು ಕಲಾಕೃತಿಯಲ್ಲಿ ರುಮಾಲೆಯವರ ದೈವಭಕ್ತಿಯನ್ನು ತೋರಿಸುತ್ತದೆ. ಈ ಚಿತ್ರಕಲಾಕೃತಿಯ ಒಳಭಾಗಕ್ಕೆ ಒಂದು ಕಂಚಿನ ತಟ್ಟೆಯಲ್ಲಿ ಶಿವಲಿಂಗವನ್ನು ಇಟ್ಟು ಪೂಜಿಸಿರುವಂತೆ ಚಿತ್ರಿಸಿದ್ದಾರೆ. ಅದರ ಎಡಭಾಗದಲ್ಲಿ ಅವರ ಎರಡು ಪಾದರಕ್ಷೆಗಳು ಇವೆ. ಆದರ ಮುಂಭಾಗದಲ್ಲಿ ಹಣತೆಯು ನಿಜವಾಗಿಯೂ ಉರಿಯುತ್ತದೆ ಎಂಬಂತೆ ತೋರುತ್ತದೆ. ಹಿಂಭಾಗದಲ್ಲಿ ಸ್ವಾಮಿಜಿ ಮತ್ತು ಲಿಂಗವನ್ನು ಹಿನ್ನೆಲೆಯಲ್ಲಿ ತೋರಿಸಿದ್ದಾರೆ. ಹಿನ್ನೆಲೆಯ ಗೋಡೆಗೆ ತಿಳಿನೆರಳೆ ಬಣ್ಣವನ್ನು ಲೇಪಿಸಿದ್ದಾರೆ. ಈ ಕಲಾಕೃತಿಯು ನೋಡುಗರಿಗೆ ಭಕ್ತಿಭಾವವನ್ನು ತೋರುವಂತೆ ಗೋಚರವಾಗುತ್ತದೆ.

**ಚಿತ್ರ ೫೫. ಶ್ರೀರಂಗ ಪಟ್ಟಣದ ಶ್ರೀರಂಗನಾಥ ಸ್ವಾಮಿ :** ಈ ಒಂದು ಕಲಾಕೃತಿಯಲ್ಲಿ ಶ್ರೀರಂಗನಾಥ ಸ್ವಾಮಿಯು ಏಳುಎಡೆ ಸರ್ಪವನ್ನೆ ಆಸಿಗೆಯಾಗಿ ಮಾಡಿಕೊಂಡು ಮಲಗಿರುವುದು ಜೀವಂತಿಕೆಯನ್ನು ತುಂಬುತ್ತದೆ. ಶ್ರೀರಂಗನಾಥಸ್ವಾಮಿಯು ತನ್ನ ಬಲಗೈಯನ್ನು ತಲೆಯ ಕೆಳಭಾಗದಲ್ಲಿ ಇಟ್ಟುಕೊಂಡು ಹಾಗೂ ಎಡಗೈಯನ್ನು ಚಾಚಿಕೊಂಡು ನಿದ್ರಿಸುತ್ತಿದ್ದಾನೆ. ಆ ಸರ್ಪವು ಅವನಿಗೆ ನೆರಳಾಗಿ ಕಾಯುತ್ತಿದೆ, ರಂಗನಾಥಸ್ವಾಮಿಗೆ ಕಡುನೀಲಿ ಮೈಬಣ್ಣವನ್ನು ತೋರಿಸಿದ್ದಾರೆ. ಹಾಗೂ ಬಿಳಿಯ ಪಂಚೆಯನ್ನು ಧರಿಸಿದ್ದಾನೆ ಎಂಬಂತೆ ತೋರಿಸಿದ್ದಾರೆ. ತಲೆಯ ಮೇಲೆ ಕಿರೀಟವಿದೆ ಕೊರಳಲ್ಲಿ ಬಂಗಾರದ ಒಡವೆಗಳಿವೆ ಹಿನ್ನೆಲೆಯಲ್ಲಿ ಹಳದಿಬಣ್ಣವನ್ನು ಲೇಪಿಸಿದ್ದಾರೆ. ಈ ಕಲಾಕೃತಿಯು ನೋಡುಗರಿಗೆ ಭಕ್ತಿಭಾವವನ್ನು ತೋರಿಸುತ್ತದೆ.

**ಚಿತ್ರ ೫೬. ತುಳಾಜಾ ಭವಾನಿ :** ರುಮಾಲೆ ಚನ್ನಬಸವಯ್ಯನವರು ತುಳಾಜಾಭವಾನಿ ದೇವಿಯ ಚಿತ್ರವನ್ನು ಭಕ್ತಿ, ಭಾವಪೂರಕವಾಗಿ ರಚಿಸಿದ್ದಾರೆ. ಈ ಒಂದು ಕಲಾಕೃತಿಯಲ್ಲಿ ದೇವಿಯ ಮುಖ ವಾಡವನ್ನು ತುಂಬಾ ರೌದ್ರತೆಯಂತೆ ನೀಲಿ ಮೈಬಣ್ಣದಲ್ಲಿ ತೋರಿಸಿದ್ದಾರೆ. ತಲೆಯ ಮೇಲೆ ಕಿರೀಟವಿದೆ. ಕೆಂಪು ವಸ್ತ್ರವನ್ನು ಧರಿಸಿದ್ದಾಳೆ ಎಂಬಂತೆ ತೋರಿಸಿದ್ದಾರೆ. ತುಳಾಜಾಭವಾನಿಯ ಎಡಭಾಗದಲ್ಲಿ ಹಳದಿಯ ಗಂಟು ಕಟ್ಟಿಇಟ್ಟಂತೆ ಇದೆ. ಕೆಳಭಾಗದಲ್ಲಿ ಎರಡು ಹಣತೆಗಳು ಉರಿಯುತ್ತಿವೆ. ದೇವಿಯ ಹಿಂಭಾಗದಲ್ಲಿ ನೆರಳೆಬಣ್ಣದ ಸೀರೆಯನ್ನು ತೋರಿದ್ದಾರೆ. ಹಿನ್ನೆಲೆಯಲ್ಲಿ ಕಲ್ಲಿನ ಗೋಡೆಯಂತೆ ಮೈವಳಿಕೆಯ ರೂಪದಲ್ಲಿ ತೋರಿಸಿದ ಕಲಾಕೃತಿ ಇದಾಗಿದೆ. ಈ ಕಲಾಕೃತಿಯನ್ನು ನೋಡುಗರಿಗೆ ಭಕ್ತಿಭಾವವನ್ನು ತೋರುತ್ತದೆ.

**ಚಿತ್ರ ೫೭. ಲಿಂಗವನ್ನು ಸುತ್ತುವರೆದ ಸರ್ಪ :** ರುಮಾಲೆ ಅವರು ನಾಗರಪಂಚಮಿ ಸರಣಿ ಕಲಾಕೃತಿಗಳಲ್ಲಿ ರಚಿಸಿದ ಚಿತ್ರಕಲಾಕೃತಿ ಇದಾಗಿದೆ. ಇದರಲ್ಲಿ ಚಿಕ್ಕಲಿಂಗವನ್ನು ಐದುಎಡೆಯ ಸರ್ಪವು ಅದಕ್ಕೆ ನೆರಳಾಗಿ ರಕ್ಷಣೆ ಕೊಡುವಂತಿದೆ. ಲಿಂಗವು ನೀಲಿಬಣ್ಣದಲ್ಲಿದ್ದು ಸರ್ಪವು ಹಳದಿ, ನೀಲಿ, ತಿಳಿಹಸಿರು ಮಿಶ್ರಿತಬಣ್ಣಗಳಿಂದ ಕೂಡಿದೆ. ಹಿನ್ನೆಲೆಯಲ್ಲಿ ತಿಳಿನೀಲಿ ಮತ್ತು ತಿಳಿಹಳದಿ, ಮಿಶ್ರ ಬಣ್ಣವನ್ನು ಲೇಪಿಸಿದ್ದಾರೆ. ಈ ಕಲಾಕೃತಿಯು ನೋಡುಗರಿಗೆ ಭಕ್ತಿಭಾವವನ್ನುಂಟು ಮಾಡುತ್ತದೆ.

**ಚಿತ್ರ ೫೮. ಲಿಂಗಕ್ಕೆ ರಕ್ಷಣೆ ಕೊಡುವ ಸರ್ಪ :** ಈ ಚಿತ್ರಕಲಾಕೃತಿಯಲ್ಲಿ ಲಿಂಗಕ್ಕೆ ಪೂಜೆ ಮಾಡಿ ಲಿಂಗದ ಮೇಲ್ಭಾಗಕ್ಕೆ ಹಳದಿ ಮತ್ತು ಕೆಂಪು ಬಣ್ಣದ ಹೂವುಗಳನ್ನು ಚೆಲ್ಲಿದ್ದಾರೆ. ಆ ಲಿಂಗದ ಪಕ್ಕದಲ್ಲಿ ಸರ್ಪವು ತಲೆಯಿಂದ ಮುಂಡದವರೆಗೆ ಮಾತ್ರ ಕಾಣುತ್ತದೆ. ಬಲಬದಿಯಲ್ಲಿ ಉಳಿದ ಸ್ವಲ್ಪ ಭಾಗವು ಕಾಣುವಂತೆ ಚಿತ್ರಿಸಿದ್ದಾರೆ. ಇಲ್ಲಿ ನೀಲಿ ಮತ್ತು ಕಪ್ಪು ಬಣ್ಣಗಳ ಪ್ರಕಾರ ಬಣ್ಣಗಳಾಗಿ ಬಳಸಿಕೊಂಡಿದ್ದಾರೆ.

**೫೯. ಗೋಕರ್ಣದ ಲಿಂಗ :** ರುಮಾಲೆ ಚೆನ್ನಬಸವಯ್ಯನವರು ಗೋಕರ್ಣದ ಲಿಂಗವನ್ನು ತುಂಬಾ ಸರಳವಾಗಿ ರಚಿಸಿದ್ದಾರೆ. ಪ್ರಕೃತಿದತ್ತವಾಗಿರುವ ಲಿಂಗಕ್ಕೆ ಹರಿಶಿಣ, ಕುಂಕುಮವನ್ನು ಇಟ್ಟು ಪೂಜಿಸಿದ್ದಾರೆ. ಅದರ ಮುಂಬಾಗದಲ್ಲಿ ಒಂದು ದಾಸವಾಳದ ಹೂವನ್ನು ಇಟ್ಟಿರುವುದು ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಹಿನ್ನೆಲೆಯ ಸುತ್ತಲು ಹಳದಿ ಬಣ್ಣವನ್ನು ಲೇಪಿಸಿದ್ದಾರೆ.

**ಚಿತ್ರ ೬೦. ಭುವನೇಶ್ವರಿ :** ಈ ಒಂದು ಚಿತ್ರಕಲಾಕೃತಿಯನ್ನು ರುಮಾಲೆಯವರು ಬಹಳ ಸರಳತೆಯಿಂದ ಚಿತ್ರರಚನೆ ಮಾಡಿದ್ದಾರೆ. ಇಲ್ಲಿ ಹಳದಿ, ಹಸಿರು, ಕೆಂಪು, ನೀಲಿ ಮತ್ತು ಬಿಳಿಯ ಎಲ್ಲಾ ತರಹದ ಹೂವುಗಳು ಒಟ್ಟಿಗೆ ಹಾಕಿ ಪೂಜೆಗೆ ಸಲ್ಲಿಸಿದ್ದಂತೆ ತೋರುತ್ತದೆ.

**ಚಿತ್ರ ೬೧. ಕಾವೇರಿ ಪ್ರಕೃತಿಯ ಚಿತ್ರ :** ಈ ಚಿತ್ರಕಲಾಕೃತಿಯನ್ನು ರುಮಾಲೆ ಚನ್ನಬಸವಯ್ಯನವರು ಕಾವೇರಿಯ ಪ್ರದೇಶದಲ್ಲಿ ಒಂದು ಸ್ಥಳವನ್ನು ಆಯ್ದುಕೊಂಡು ಚಿತ್ರಿಸಿದ; ಚಿತ್ರಕಲಾಕೃತಿಯು ಇದಾಗಿದೆ. ಈ ಕಲಾಕೃತಿಯಲ್ಲಿ ಒಂದು ಬಂಡೆಯ ಪೊಟರೆ, ಅದರ ಮದ್ಯ ಒಂದು ಬಳ್ಳಿ ಹಸಿರು ಗಿಡವನ್ನು ರಚಿಸಿದ್ದಾರೆ. ಅದರ ಹಿಂಬದಿಗೆ ದೊಡ್ಡ ಮರಗಳ ಹೂದೆಲೆಯನ್ನು ರಚಿಸಿದ್ದಾರೆ. ಯಥಾದರ್ಶನಕ್ಕೆ ಪೂರಕವಾಗಿದೆ. ನೆರಳು-ಬೆಳಕಿನ ಸಂಯೋಜನೆಯನ್ನು ........... ತೀಕ್ಷಣವಾಗಿ ತೋರಿಸಿದ್ದಾರೆ. ಮರದ ಎಲೆಗಳಿಗೆ ಅಲ್ಲಲ್ಲಿ, ಹಳದಿ ಮತ್ತು ನೀಲಿ ಬಣ್ಣವನ್ನು ಲೇಪಿಸಿದ್ದಾರೆ. ಒಟ್ಟಾರೆಯಾಗಿ ಈ ಕೃತಿಯನ್ನು ವೀಕ್ಷಿಸಿದಾಗ ನೋಡುಗರಿಗೆ ಸುಂದರವಾಗಿ ಕಾಣುತ್ತದೆ.

**ಚಿತ್ರ ೬೨. ಮಸ್ತಿಯ ಮುಂಜಾನೆ :** ರುಮಾಲೆ ಅವರು ಈ ಒಂದು ಕಲಾಕೃತಿಯನ್ನು ಮುಂಜಾನೆ ಹೊತ್ತಿನಲ್ಲಿ ರಚಿಸಿರುವಂತಹ ಕೃತಿ ಎನ್ನಬಹುದು. ನಾವು ಈ ಕೃತಿಯನ್ನು ಗಮನಿಸಿದಾಗ, ಒಂದು

ದೊಡ್ಡ ಸಾಗರ; ಅದರ ದಡದ ಮೇಲೆ ಕುಳಿತು ಮುಂಜಾನೆ ಮಸಿಕಿನಲ್ಲಿ ರಚಿಸಿರುವಂತ ಕಲಾಕೃತಿ ಎಂದು........... ಈ ಕಲಾಕೃತಿಯಲ್ಲಿ ಮುಂಜಾನೆಯ ಹಿಬ್ಬನಿಯು ಬೆಟ್ಟ-ಗುಡ್ಡಗಳ ಮೇಲೆ ಗಿಡಮರಗಳ ಮೇಲೆ, ಸುರಿಯುತ್ತಿದೆ, ಎಂಬಂತೆ ತೋರುತ್ತದೆ. ಇಲ್ಲಿ ರುಮಾಲೆ ಅವರು ಬಣ್ಣಗಳನ್ನು ಪಾರದರ್ಶಕವಾಗಿ ಬಳಸಿಕೊಂಡಿದ್ದಾರೆ.

**ಚಿತ್ರ ೬೩. ಸಾಲಿಗ್ರಾಮದಲ್ಲಿ ಶಿವಬಾಲ ಯೋಗಿಗಳ ಪ್ರತಿರೂಪ :** ರುಮಾಲೆ ಚೆನ್ನಬಸವಯ್ಯನವರು ಮತ್ತು ಒಂದು ಕಲಾಕೃತಿಯ ಸಾಲಿಗ್ರಾಮದಲ್ಲಿ ಶಿವಬಾಲಯೋಗಿಯನ್ನು ಕಾಣುತ್ತಾರೆ. ಈ ಶಿವಬಾಲಯೋಗಿ ಸ್ವಾಮಿಯನ್ನು ರುಮಾಲೆಯವರ ಮನದಲ್ಲಿ ಸ್ವಾಮೀಜಿಯ ಮುಖವು, ಅರ್ಧನಾರೇಶ್ವರನ ಹಾಗೆ ಕಾಣುತ್ತಾರೆ. ಆಗಾಗಿಯೇ ಇದರಲ್ಲಿ ಒಂದು ಭಾಗದಲ್ಲಿ ಮಾತ್ರ ಮೀಸೆಯನ್ನು ತೋರಿಸಿದ್ದಾರೆ. ಜಲಭಾಗದಲ್ಲಿ ಮೀಸೆಯನ್ನು ಚಿತ್ರಿಸಿಲ್ಲ ಅದು ಪಾರ್ವತಿಯ ಮುಖದಂತೆ ಎಂಬ ಭಾವನೆ. ಆ ಸಾಲಿಗ್ರಾಮಕ್ಕೆ ಹೂವನ್ನು ಇಟ್ಟು ಮುಂದೆ ಊದುಬತ್ತಿ ಹಚ್ಚಿದ ಹಾಗೆ ತೋರಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಹಳದಿ ಮತ್ತು ನೀಲಿಬಣ್ಣವನ್ನು ಲೇಪಿಸಿದ್ದಾರೆ. ಚೌಕಕಾರದ ಬಂಡೆಗಳಂತೆ ಅವರ ಕುಂಚದಿಂದ ತೋರಿಸಿದ್ದಾರೆ.

**ಚಿತ್ರ ೬೪. ಲಿಂಗದ ಚಿತ್ರ :** ಈ ಕಲಾಕೃತಿಯಲ್ಲಿ ರುಮಾಲೆಯವರು ಶಿವನ ಲಿಂಗಕ್ಕೆ ಹೂಗಳಿಂದ ಅಲಂಕರಿಸಿದ ರೀತಿಯಲ್ಲಿ ಚಿತ್ರ ರಚನೆ ಮಾಡಿದ್ದಾರೆ. ಲಿಂಗದ ಮೇಲಿನ ಭಾಗದಲ್ಲಿ ಬಿಳಿ ಹೂವುಗಳನ್ನು ತೋರಿಸಿದ್ದಾರೆ. ಅಲ್ಲಲ್ಲಿ ಚಿಕ್ಕದಾಗಿ ಹಳದಿ, ಕೆಂಪು ಬಣ್ಣವನ್ನು ತೋರಿಸಿದ್ದಾರೆ. ಲಿಂಗದ ಕೆಳಭಾಗದಲ್ಲಿ ಸುತ್ತಲು ಕೆಂಪು ಬಣ್ಣದ ಹೂವುಗಳನ್ನು ಇಟ್ಟು ಅಲಂಕರಿಸಿದ್ದಾರೆ. ಆ ಚಿತ್ರವನ್ನು ಗಮನಿಸಿದಾಗ ಕಲ್ಲಿನ ಹುಬ್ಬು ಶಿಲ್ಪವೆಂದು ತಿಳಿಯುವಂತೆ ಚಿತ್ರಿಸಿದ್ದಾರೆ. ಹಿನ್ನೆಲೆಯಲ್ಲಿ ಕಪ್ಪುಮಿಶ್ರಿತ ನೀಲಿ ಬಣ್ಣವನ್ನು ತೋರಿಸಿದ್ದಾರೆ.

**ಚಿತ್ರ ೬೫. ಪ್ರಕೃತಿಯ ಒಂದು ನೋಟ :** ಈ ಚಿತ್ರಕಲಾಕೃತಿಯನ್ನು ರುಮಾಲೆಯವರು ಮುಂಜಾನೆ ಹೊತ್ತಿನಲ್ಲಿ ರಚಿಸಿರುವಂತೆ ಕಾಣುತ್ತದೆ. ಈ ಕಲಾಕೃತಿಯನ್ನು ಗಮನಿಸಿದಾಗ ಬಯಲು ಪ್ರದೇಶದಲ್ಲಿ ಕುಳಿತು ಚಿತ್ರಿಸಿರುವಂತೆ ತೋರುತ್ತದೆ. ದೂರದಲ್ಲಿ ಬೆಟ್ಟಗುಡ್ಡಗಳು, ಸಮೀಪದಲ್ಲಿ ಹಸಿರು ಹುಲ್ಲಿನ ವಾತಾವರಣವನ್ನು ಸೃಷ್ಟಿಸಿದ್ದಾರೆ. ಹಿನ್ನೆಲೆಯಲ್ಲಿ ಮೋಡಗಳ ಮೈವಳಿಕೆಯನ್ನು ತುಂಬ ವಿಶಿಷ್ಟವಾಗಿ ತೋರಿಸಿದ್ದಾರೆ. ಈ ಕಲಾಕೃತಿಯು ನೋಡುಗರಿಗೆ ಆನಂದ ಉಂಟು ಮಾಡುವಂತೆ ತೋರುತ್ತದೆ.

**ಚಿತ್ರ ೬೬. ಶ್ರೀಲಂಕಾದ ಒಂದು ನೋಟ :** ಈ ಕಲಾಕೃತಿಯು ನದಿಯ ದಡದಲ್ಲಿ ಕುಳಿತು ರಚಿಸಿರುವ ಕೃತಿಯನ್ನು ಹೇಳಬಹುದು. ಕಲಾಕೃತಿಯ ಬಲಬದಿಯಲ್ಲಿ ಕಲ್ಲಿನ ಬಂಡೆ, ಅದರ ಮೇಲೆ ಹಸಿರು ಬಣ್ಣದ ಗಿಡವನ್ನು ತೋರಿಸಿದ್ದಾರೆ. ಇದರ ಎಡಬದಿಗೆ ಕಲ್ಲಿನಿಂದ ಕಟ್ಟಿದ ಗೋಡೆಯು ಬಿದ್ದು

ಅಲ್ಪಸ್ವಲ್ಪ ಉಳಿದಿರುವಂತೆ ತೋರುತ್ತದೆ. ಹಿನ್ನೆಲೆಯಲ್ಲಿ, ನದಿಯ ನೀರು ಸಾದಾರಣವಾದ ಅಲೆಗಳನ್ನು ತೋರಿಸಿದ್ದಾರೆ. ಈ ಕಲಾಕೃತಿಯು ನೋಡುಗರಿಗೆ ಆನಂದ ನೀಡುವಂತಿದೆ.

**ಚಿತ್ರ ೬೭. ಕರಿಘಟ್ಟ ಬೆಟ್ಟ :** ಈ ಒಂದು ಕಲಾಕೃತಿಯನ್ನು ರುಮಾಲೆ ಚೆನ್ನಬಸವಯ್ಯನವರು ಯಥದರ್ಶನವನ್ನು ಕಚಿತತೆಯಿಂದ ತೋರಿಸಿದ್ದಾರೆ. ಹಾಗೂ ಸೂಕ್ಷ್ಮತೆಯಿಂದ ನೆರಳು-ಬೆಳಕನ್ನು ವರ್ಣಗಳ ಮೂಲಕ ಅವರ ಕುಂಚದ ಕೈಚಳಕವನ್ನು ತೋರಿಸಿದ್ದಾರೆ. ಈ ಸ್ಥಳವನ್ನು ಲೋಕಪಾವನಿ ಉಗಮ ಸ್ಥಾನವೆಂದೇ ಕರೆಯುತ್ತಾರೆ. ಈ ಕಲಾಕೃತಿಯಲ್ಲಿ ಹಿಂಭಾಗದಲ್ಲಿ ದೊಡ್ಡದಾದ ಕಲ್ಲಿನ ಬೆಟ್ಟವನ್ನು ತೋರಿಸಿದ್ದಾರೆ. ಆ ಬೆಟ್ಟವು ಏಕಶಿಲ ಬೆಟ್ಟದಂತೆ ಕಾಣಿಸುತ್ತದೆ. ಅದರ ಕೆಳಭಾಗದಲ್ಲಿ ಗಿಡ-ಮರಗಳನ್ನು ತೋರಿಸಿ, ಅದರ ಪಕ್ಕದಲ್ಲೇ ನದಿಯ ದಡದಲ್ಲಿ ದೋಣಿಯಿಂದ ಭಕ್ತಾದಿಗಳು ಬರುತ್ತಿರುವುದನ್ನು ತುಂಬ ನೈಜವಾಗಿ ತೋರಿಸಿದ್ದಾರೆ. ಮತ್ತು ಸಾರ್ವಜನಿಕರು ಓಡಾಡುವ ಕಾಲುದಾರಿಯನ್ನು ಗಮನಿಸ ಬಹುದು. ಹಾಗೂ ನೀಲಿನಲ್ಲಿ ಬೆಟ್ಟ ಮತ್ತು ಗಿಡ-ಮರಗಳನ್ನು ಪ್ರಕೃತಿಬಿಂಬವನ್ನು ಸ್ಪಷ್ಟತೆಯಿಂದ ತೋರಿಸಿದ್ದಾರೆ.

**ಚಿತ್ರ ೬೮. ಬ್ರಹ್ಮಕಮಲ :** ಈ ಕಲಾಕೃತಿಯಲ್ಲಿ ರುಮಾಲೆ ಅವರು ಬ್ರಹ್ಮ ಕಮಲವನ್ನು ನೈಜರೀತಿಯಲ್ಲಿ ಚಿತ್ರಿಸಿದ್ದಾರೆ. ನೆರಳು ಮತ್ತು ಬೆಳಕಿಗೆ ಬಿಳಿ ಬಣ್ಣವನ್ನು ಬಳಸಿಕೊಂಡಿದ್ದಾರೆ. ಈ ಕೃತಿಯಲ್ಲಿ ಬ್ರಹ್ಮ ಕಮಲವು ಕೇಂದ್ರಬಿಂದುವಾಗಿ ತೋರುತ್ತದೆ. ಹಾಗೂ ಅದರ ಕಾಂಡ ಮತ್ತು ಎಲೆಗಳನ್ನು ತೋರಿಸಿದ್ದಾರೆ. ಹಿನ್ನೆಲೆಯಲ್ಲಿ ತಿಳಿಹಳದಿ ಮತ್ತು ಕೆಂಪು ಮಿಶ್ರಣ ಬಣ್ಣವನ್ನು ಬಳಸಿ ಕೊಂಡಿದ್ದಾರೆ.

**ಚಿತ್ರ ೬೯. ಕಬ್ಬನ್‌ಪಾರ್ಕ್‌ನ ಕೊನೆಯ ಚಿತ್ರ :** ರುಮಾಲೆ ಅವರು ಈ ಕಲಾಕೃತಿಯನ್ನು ೧೯೮೩ರಲ್ಲಿ ಚಿತ್ರಿಸಿದ ಕಲಾಕೃತಿ. ಇದರಲ್ಲಿ ಪ್ರಮುಖವಾಗಿ ಎರಡು ಮರಗಳು ಕಂಡುಬರುತ್ತವೆ. ಒಂದು ಹಸಿರು ಬಣ್ಣದ ಮರ ಮತ್ತೊಂದು ಕೆಂಪು ಬಣ್ಣದ ಮರ ಈ ಎರಡು ಮರಗಳನ್ನು ಯಥಾದರ್ಶನಕ್ಕೆ ಪೂರಕವಾಗಿ ಚಿತ್ರಿಸಿದ್ದಾರೆ. ಮರಗಳ ಕೆಳಭಾಗದಲ್ಲಿ ಸಣ್ಣ ಗಿಡಗಳನ್ನು ತೋರಿಸಿದ್ದಾರೆ. ಹಿನ್ನೆಲೆಯಲ್ಲಿ ತಿಳಿನೀಲಿ ಬಣ್ಣವನ್ನು ಬಳಸಿದ್ದಾರೆ.

**ಚಿತ್ರ ೭೦. ಶ್ರೀಲಂಕಾದ ಒಂದು ನೋಟ :** ಈ ಒಂದು ಕಲಾಕೃತಿಯನ್ನು ರುಮಾಲೆ ಅವರು ತಿಳಿಬಣ್ಣಗಳಿಂದ ರಚಿಸಿದ್ದಾರೆ. ಈ ಕಲಾಕೃತಿಯಲ್ಲಿ ಸರೋವರಗಳ ಮಧ್ಯ ನೀರು ಹರಿಯುವಂತೆ ತೋರಿಸಿದ್ದಾರೆ. ದೂರದ ಬೆಟ್ಟಗಳಿಗೆ ನೀಲಿ ಆಕಾಶದ ಬಣ್ಣವನ್ನು ತೋರಿಸಿದ್ದಾರೆ. ಹಾಗೂ ಮುಂಭಾಗದಲ್ಲಿ ಹುಲ್ಲಿನ ಪೊದೆಯನ್ನು ತೋರಿಸಿದ್ದಾರೆ.



ಶಬಲಾದೇವಿ ಕಚೆ



ಸಾಧುವಿನ ಭಾವಚಿತ್ರ

ತೈಲವರ್ಣ



ಹೈಕೋರ್ಟ್ ಹಿಂಭಾಗದ ರಶ್ಮಿ ಲಾಸ್ಯ



ಗೊಲ್ಮೊಹರ್‌ನ ಹೂವಿನ ಚಿತ್ರ

ತೈಲವರ್ಣ



ತಲಕಾವೇರಿ ಉಗಮಸ್ಥಾನ



ನವರಂಗ ಉದ್ಯಾನವನದಲ್ಲಿ ಅರಳಿದ ಹೂವು



ಬೆಂಗಳೂರು ಕಬ್ಬನ್ ಪಾರ್ಕ್



ಬೆಂಗಳೂರು ಕಬ್ಬನ್ ಪಾರ್ಕ್ ತೈಲವರ್ಣ



ಕಬ್ಬನ್ ಪಾರ್ಕ್‌ನ ಹಳದಿ
ಹೂವಿನ ಮರ



ಗೊಲ್ಮೊಹರ್–ರಾಜಾಜಿನಗರ



ನಂದಿ ಮತ್ತು ಶಿವಲಿಂಗ



ಗೊಲ್ಮೊಹರ್ ಹೂವುಗಳ ಮಧ್ಯ ನಿಂತ ಯೋಧ ತೈಲವರ್ಣ

**II ತೈಲವರ್ಣ ಚಿತ್ರಗಳು**

**ಭಾವಚಿತ್ರಗಳು**

**ಚಿತ್ರ ೭೭. ಜಲಸ್ಕಂದನ ವಿದ್ಯೆಯಲ್ಲಿ ಶಿವಬಾಲಯೋಗಿ :** ರುಮಾಲೆ ಚೆನ್ನಬಸವಯ್ಯನವರು, ಶಿವಬಾಲಯೋಗಿಯ ಭಕ್ತನಾಗಿದ್ದರು. ಅದರ ಜೊತೆಯಲ್ಲಿ ೧೦ ವರ್ಷಗಳ ಕಾಲ ಇದ್ದು, ಅವರ ಸೇವೆಯನ್ನು ಮಾಡಿಕೊಂಡು ಬಂದಿದ್ದಾರೆ. ಸ್ವಾಮೀಜಿಯ ಭಕ್ತಿಯ ಪ್ರಭಾವದಿಂದ ಕೆಲವು ಅವರ ಭಾವಚಿತ್ರಗಳನ್ನು ಅವರ ಚಿತ್ರಕಲಾಕೃತಿಯಲ್ಲಿ ಚಿತ್ರಿಸಿದ್ದಾರೆ. ಈ ಚಿತ್ರಕಲಾಕೃತಿಯಲ್ಲಿ, ಶಿವಬಾಲಯೋಗಿ ಸ್ವಾಮೀಜಿಯವರು ಪರಮಾತ್ಮನ ದ್ಯಾನದಲ್ಲಿ ಮುಳಿಗಿದ್ದಾರೆ. ವಿಶಾಲವಾದ ಭುಜ ಅವರ ಎದೆಗೆ ನೀಡಿರುವ ವಿಶೇಷ ಪ್ರಾದಾನ್ಯತೆಯು ಸಂದರ್ಭೋಚಿತ, ಇದರಿಂದ ಈ ವ್ಯಕ್ತಿಯ ಧೀಮಂತಿಕೆ ಮತ್ತು ಪ್ರಾಬಲ್ಯಗಳನ್ನು ಪರಿಣಾಮಕಾರಿಯಾಗಿ, ಚಿತ್ರಿತವಾಗಿದೆ. ಅವರ ಮುಖದಲ್ಲಿ ದ್ಯಾನಸಕ್ತಿಯನ್ನು ಮತ್ತು ವಯಸ್ಸಿನ ನಿಖರತೆಯನ್ನು ಸುಚಿಸುವಂತೆ ಚಿತ್ರಿಸಲಾಗಿದೆ. ಹಿನ್ನೆಲೆಯಲ್ಲಿ ದಟ್ಟವಾದ, ಹಸಿರು, ಹಳದಿ ಮತ್ತು ಕಪ್ಪು ಬಣ್ಣಗಳ ಮಿಶ್ರಣದಿಂದ ಲೇಪನ ಮಾಡಿದ್ದಾರೆ.

**ಚಿತ್ರ ೭೮. ಕಲಾವಿದನ ಕಲ್ಪನೆಯಲ್ಲಿ ಪಂಜಾಬಿ ಯುವಕ :** ಈ ಒಂದು ಚಿತ್ರಕಲಾಕೃತಿಯನ್ನು ತೈಲಮಾದ್ಯಮದಲ್ಲಿ ಚಿತ್ರಿಸಿದ್ದಾರೆ. ಮುಖದಲ್ಲಿ ಮಂದಹಾಸವು ಅದ್ಬುತವಾಗಿ ಮೂಡಿ ಬಂದಿದೆ. ಮುಕ್ಕಾಲು ಭಾಗ ಬೆಳಕಿನ ಛಾಯೆಯನ್ನು ತೋರಿಸಿದ್ದಾರೆ. ಅವರು ಧರಿಸಿರುವ ವಸ್ತ್ರವು ನೈಜವಾಗಿ ಮೂಡಿ ಬಂದಿದೆ. ಗಾಢವಾದ ನೆರಳು ಬೆಳಕನ್ನು ತೋರಿಸಿ ಕೃತಿಗೆ ಹೆಚ್ಚು ಮೆರಗು ನೀಡಿದ್ದಾರೆ. ಹಿನ್ನೆಲೆಯಲ್ಲಿ ಹಳದಿ ನೀಲ, ಬಿಳಿ ಮಿಶ್ರಿತ ಬಣ್ಣಗಳನ್ನು ಲೇಪಿಸಿದ್ದಾರೆ.

**ಚಿತ್ರ ೭೯. ಶಬಲಾದೇವಿಕಬೆ :** ಈ ಚಿತ್ರಕಲಾಕೃತಿಯನ್ನು ರುಮಾಲೆ ಚೆನ್ನಬಸವಯ್ಯನವರು ತೈಲವರ್ಣದಲ್ಲಿ ಚಿತ್ರರಚನೆ ಮಾಡಿದ್ದಾರೆ. ರುಮಾಲೆ ಅವರ ಆತ್ಮೀಯ ಗೆಳೆಯರಾದ ಮಾಧವರಾವ್‌ಕಬೆ ಅವರ ಮಗಳು ಶಬಲಾದೇವಿ ಕಬೆ ಅವರ ಭಾವಚಿತ್ರ, ಈ ಕೃತಿಯಲ್ಲಿ ರುಮಾಲೆಯವರ ವರ್ಣಬಳಕೆಯ ನಿರ್ವಹಣೆ ಬೆರಗುಗೊಳಿಸುತ್ತದೆ. ಮುಖದಲ್ಲಿಯ ಮಂದಹಾಸ ತಲೆಯ ಕೂದಲು ಬಾಬ್‌ಕಟ್ ಶೈಲಿಯಲ್ಲಿದೆ. ಕತ್ತಿನವರೆಗೂ ಧರಿಸಿದ ಬಟ್ಟೆ ನೈಜತೆಯನ್ನು ತೋರಿಸುತ್ತದೆ. ನೆರಳ-ಬೆಳಕನ್ನು ಸೂಕ್ಷ್ಮತೆಯಿಂದ ತೋರಿಸಿದ್ದಾರೆ. ಹಿನ್ನೆಲೆಯಲ್ಲಿ ಹಳದಿ ಬಣ್ಣವನ್ನು ತೋರಿಸಿದ್ದಾರೆ.

**ಚಿತ್ರ ೮೦. ಸಾದುವಿನ ಭಾವಚಿತ್ರ :** ರುಮಾಲೆಯವರು ಈ ಕಲಾಕೃತಿಯನ್ನು ತೈಲವರ್ಣದಲ್ಲಿ ಚಿತ್ರಿಸಿದ್ದಾರೆ. ಇದು ಒಬ್ಬ ಸಾಧುವಿನ ಚಿತ್ರವಾಗಿದ್ದು ಇಲ್ಲಿ ಆ ವ್ಯಕ್ತಿಯು ಧರಿಸಿದ ಬಿಳಿಬಣ್ಣದ ಬಟ್ಟೆಯಲ್ಲಿ ಮೂಡಿದ ತಾಜಾತನ ಮುಖದಲ್ಲಿ ಶಾಂತಕಳೆ, ವಯಸ್ಸಿನ ನಿಖರತೆಯನ್ನು ಸೂಚಿಸುವ ಬಿಳಿಮೀಸೆ ತಲೆಯ ಮೇಲಿನ ಸುತ್ತುವರೆದ ಜಡೆ, ಹಣೆಯಲ್ಲಿ ಕೆಂಪು-ಬಿಳಿಯ ನಾಮ, ಮುಖದಲ್ಲಿ ಸೂಕ್ಷ್ಮ ನೆರಳ-ಬೆಳಕಿನ ಸಂಯೋಜನೆಯನ್ನು ತೈಲವರ್ಣದಲ್ಲಿ ಅತ್ಯಂತ ಸೂಕ್ಷ್ಮವಾಗಿ ತೋರಿಸಿದ್ದಾರೆ.

ಆ ಸಾಧುವಿನ ಹಿಂಬದಿಯಲ್ಲಿ ಒಂದು ಮರವಿದೆ. ಹಿನ್ನೆಲೆಯಲ್ಲಿ ನೀರಿನ ದೃಶ್ಯವನ್ನು ತೋರಿಸಿದ್ದಾರೆ. ರುಮಾಲೆಯವರ ಕಲಾಪ್ರೌಢಮೆಗೆ ಸಾಕ್ಷಿಯಾಗಿದೆ.

**ಚಿತ್ರ ೮೧. ಬೆಂಗಳೂರಿನ ಗುಲ್ಮೊಹರ್ ಹೂವಿನ ಮರದ ದೃಶ್ಯ :** ರುಮಾಲೆಯವರು ಈ ಕಲಾಕೃತಿಯನ್ನು ೧೯೮೬ರಲ್ಲಿ ರಚಿಸಿರುವಂತಹ ಪ್ರಕೃತಿ ಚಿತ್ರವಿದು. ಈ ಒಂದು ಕಲಾಕೃತಿಯಲ್ಲಿ ಗುಲ್ಮೊಹರ್ ಮರವನ್ನು ಕೇಂದ್ರಬಿಂದುವಾಗಿ ಇಟ್ಟುಕೊಂಡು ರಚಿಸಿರುವ ಕಲಾಕೃತಿಯಾಗಿದೆ. ಆ ಮರದ ಪ್ರತಿಯೊಂದು ಹೂವುಗಳು, ಮರದ ಕೊಂಬೆಗಳು, ಹಾಗೂ ಎಲೆಗಳನ್ನು ಬಿಡಿ-ಬಿಡಿಯಾಗಿ ತೋರಿಸಿ ಮರದ ಸ್ಪಷ್ಟತೆಯನ್ನು ತುಂಬ ಸೂಕ್ಷ್ಮವಾಗಿ ನೈಜರೀತಿಯಲ್ಲಿ ನೆರಳ-ಬೆಳಕಿನ ಸ್ಪಷ್ಟತೆಯು ಎದ್ದು ಕಾಣುವಂತಿದೆ. ಆ ಮರದ ಕೆಳಭಾಗದ, ಬಲಭಾಗದಲ್ಲಿ ಒಂದು ಚಿಕ್ಕ ಬಿಳಿಯ ಗೋಡೆಯೊಂದನ್ನು ತೋರಿಸಿದ್ದಾರೆ. ಎಡಬದಿಯಲ್ಲಿ ಚಿಕ್ಕದಾದ ಮರಗಳ ಸಾಲನ್ನು ತೋರಿಸಿದ್ದಾರೆ. ಹಿನ್ನೆಲೆಯಲ್ಲಿ ಬಿಳಿಮಿಶ್ರಿತ ನೀಲಿಬಣ್ಣವನ್ನು ತೋರಿಸಿದ್ದಾರೆ. ಒಟ್ಟಿನಲ್ಲಿ ಕಲಾ ವೀಕ್ಷಕರ ಸಹೃದಯರಿಗೆ ಆನಂದವನ್ನು ನೀಡುವಂತೆ ಈ ಕಲಾಕೃತಿಯನ್ನು ಸ್ಪಷ್ಟಪಡಿಸಿದ್ದಾರೆ.

**ಚಿತ್ರ ೮೨. ಕೂಡಲ ಸಂಗಮ :** ರುಮಾಲೆ ಅವರಿಗೆ ಆಧ್ಯಾತ್ಮದ ಒಲವು ಹೆಚ್ಚು ದೇವರ ಮೇಲೆ, ದೇಶದ ಮೇಲೆ, ಸ್ವಾಮೀಜಿಯವರ ಮೇಲೆ ಹೀಗೆ ಪೂಜೆಪುನಸ್ಕಾರ ದೇವರು ಎಂದರೇ ಅಪಾರ ಪ್ರೀತಿ ಎಂಬುದಕ್ಕೆ ಅವರು ರಚಿಸಿರುವ ಕಲಾಕೃತಿಗಳಲ್ಲಿ ಸಾಕಷ್ಟು ದೇವರ ಕಲಾಕೃತಿಗಳನ್ನು ರಚಿಸಿದ್ದಾರೆ. ಅದರಲ್ಲಿ ಕೂಡಲ ಸಂಗಮಚಿತ್ರ ಒಂದಾಗಿದೆ. ಈ ಕಲಾಕೃತಿಯನ್ನು ೧೯೭೪ರಲ್ಲಿ ತೈಲವರ್ಣದಿಂದ ರಚಿಸಿದ್ದಾರೆ. ಈ ಕಲಾಕೃತಿಯು ಛಾಯಚಿತ್ರವನ್ನು ಮೀರಿಸುವಂತಹ ಒಂದು ಅದ್ಭುತ ಕಲಾಕೃತಿಯು ಇದಾಗಿದೆ. ಈ ಕಲಾಕೃತಿಯು ಅವರ ಎಲ್ಲಾ ಕಲಾಕೃತಿಗಳಿಗಿಂತ ತುಂಬಾ ಚೆನ್ನಾಗಿ ಮೂಡಿಬಂದಿದೆ. ಅದರಲ್ಲಿಯ ಬಣ್ಣಗಳ ಬಳಕೆ, ವಸ್ತುಗಳ ಸಂಯೋಜನೆ, ಯಥಾದರ್ಶನದ ಖಚಿತತೆ, ಹಾಗೂ ನೆರಳು ಬೆಳಕಿನ ವಿನ್ಯಾಸ ಅದ್ಭುತವಾಗಿ ಮೂಡಿಬಂದಿದೆ. ಕಲಾಕೃತಿಯ ಎಡಬದಿಯಲ್ಲಿ ಚಿಕ್ಕದಾಗಿ ಒಂದು ಅನುಭವದ ಮಂಟಪವನ್ನು ತೋರಿಸಿದ್ದಾರೆ. ಅದರ ಹಿಂಬದಿಯಲ್ಲೇ ಹರಿಯುವ ನದಿಯ ನೀರನ್ನು ತೋರಿಸಿದ್ದಾರೆ. ಆ ನೀರಿನ ಮಧ್ಯೆ ಅಲ್ಲಲ್ಲಿ ಎತ್ತರದ ಭೂಪ್ರದೇಶವನ್ನು ತೋರಿಸಿದ್ದಾರೆ. ಕಲಾಕೃತಿಯು ಎಡಭಾಗದ ಮೇಲಿನ ಭಾಗದಲ್ಲಿ ಶಿವನ ಲಿಂಗವನ್ನು ಹೂನಿಂದ ಅಲಂಕರಿಸಿ, ಕೆಂಪು ಮತ್ತು ಬಿಳಿಯ ನಾಮವನ್ನು ಬಳಿದಿರುವಂತೆ ತೋರಿಸಿದ್ದಾರೆ. ಇಷ್ಟು ಒಂದು ಬದಿಯಲ್ಲಿದ್ದರೆ, ಮತ್ತೊಂದು ಬದಿಯಲ್ಲಿ ಅಂದರೆ ಬಲಭಾಗದಲ್ಲಿ ದೊಡ್ಡದಾಗಿ ಅರಿಯುವ ಸಂಗಮದ ನದಿಯನ್ನು ತೋರಿಸಿ, ಅದರ ದಡದಲ್ಲಿಯೇ ದೊಡ್ಡದಾದ ಮರವೊಂದನ್ನು ಚಿತ್ರಿಸಿದ್ದಾರೆ. ಅದರ ಬಲಬದಿಯಲ್ಲಿಯೇ ಮೇಲಕ್ಕೆ ಹೋಗಲು ಮೆಟ್ಟಿಲನ್ನು ತೋರಿಸಿ, ಪಕ್ಕದಲ್ಲಿ ಬಿಳಿ ಮತ್ತು ಹಳದಿ ಕಲ್ಲುಗಳನ್ನು ಚಿತ್ರಿಸಿದ್ದಾರೆ. ಆ ಕಲ್ಲುಗಳ ಮಧ್ಯದಲ್ಲಿಯ ಸಣ್ಣಪುಟ್ಟ ಗಿಡಮರಗಳಿವೆ. ಅದನ್ನು ಮುಂದು ಒಂದು ದೂರದಲ್ಲಿ ಕೂಡಲ ಸಂಗಮದ ದೇವಾಲಯವನ್ನು

ತುಂಬಾ ಸ್ಪಷ್ಟತೆಯಿಂದ ಯಥಾದರ್ಶನಕ್ಕೆ ಪೂರಕವಾಗಿ ತೋರಿಸಿದ್ದಾರೆ. ಹಿನ್ನೆಲೆಯಲ್ಲಿ ಹಳದಿ, ನೀಲಿ ಬಣ್ಣವನ್ನು ಬಿಳಿ ಮಿಶ್ರಣದೊಂದಿಗೆ ಲೇಪನ ಮಾಡಿದ್ದಾರೆ.

**ಚಿತ್ರ ೮೩. ಹೈಕೋರ್ಟ್ ಹಿಂಬಾಗದ ರಶ್ಮಿಲಾಸ್ಯ :** ಈ ನಿಸರ್ಗ ಚಿತ್ರಣವನ್ನು ತೈಲವರ್ಣ ಮಧ್ಯಮದಲ್ಲಿ ಕ್ಯಾನವಾಸಿನ ಮೇಲೆ ಚಿತ್ರಿಸಲಾಗಿದೆ. ಬೆಂಗಳೂರಿನಲ್ಲಿರುವ ಹೈಕೋರ್ಟ್ ಹಿಂಬಾಗದಲ್ಲಿ ಸಾಲುಮರಗಳನ್ನು ಆಯ್ದುಕೊಂಡು ತುಂಬಾ ಸುಂದರವಾಗಿ ಚಿತ್ರಿಸಿದ್ದಾರೆ. ಇಲ್ಲಿ ನೆರಳು ಬೆಳಕಿನ ವಿನ್ಯಾಸವನ್ನು ತುಂಬಾ ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಹೈಕೋರ್ಟ್ ಹಿಂಬಾಗದ ಸಾಲುಮರಗಳು ಗಾಳಿಗೆ ಎಲೆಗಳು ಅಲುಗಾಡುತ್ತವೆ ಎಂಬಂತೆ ಅತ್ತಿ ಸೂಕ್ಷ್ಮವಾಗಿ ಚಿತ್ರರಚನೆ ಮಾಡಿದ್ದಾರೆ. ಮರಗಳ ಕೆಳಭಾಗದಲ್ಲಿ ಅವುಗಳ ನೇರಳಿನ ಛಾಯವನ್ನು ತುಂಬಾ ಸೊಗಸಾಗಿ ಬಣ್ಣಗಳ ಮೂಲಕ್ಕೆ ತಮ್ಮ ಕುಂಚದ ಕೈಚಳಕದಿಂದ, ಕಲಾಕೃತಿಯ ಶ್ರೀಮಂತಿಕೆಯನ್ನು ಮೆರೆಸಿದ್ದಾರೆ. ಹಿನ್ನೆಲೆಯಲ್ಲಿ ಹೈಕೋಟ್ ಗೋಡೆಯನ್ನು ಬ್ರೌನ್ ಬಣ್ಣಗಳಿಂದ ತೋರಿಸಿ ಅಲ್ಲಲ್ಲಿ ನಾಲ್ಕು ಕಿಟಕಿಗಳನ್ನು ತೋರಿಸಿದ್ದಾರೆ. ಆ ಗೋಡೆಯಲ್ಲಿ ಬೆಳಕಿನ ಛಾಯೆಯನ್ನು ತುಂಬಾ ಸೂಕ್ಷ್ಮವಾಗಿ ತೋರಿಸಿದ್ದಾರೆ. ಈ ಕಲಾಕೃತಿಯು ನೋಡುಗರ ಮನಸ್ಸಿಗೆ ಆನಂದವನ್ನು ಉಂಟುಮಾಡುವಂತೆ ತೋರುತ್ತದೆ.

**ಚಿತ್ರ ೮೪. ಗೋಲ್ಮೊಹರ್‌ನ ಹೂವಿನಚಿತ್ರ :** ಇಂತ ಸುಂದರವಾದ ರಮಣೀಯ ದೃಶ್ಯವನ್ನು ರುಮಾಲೆ ಅವರು ೧೯೮೭ರಲ್ಲಿ ಬೆಂಗಳೂರಿನ ಪಾರ್ಕ್‌ವೊಂದರಲ್ಲಿ ಕುಳಿತು ರಚಿಸಿರುವ ಕಲಾಕೃತಿ ಇದಾಗಿದೆ. ಬೆಂಗಳೂರಿನ ರಮಣೀಯವಾದ ಪರಿಸರವು ಹೆಚ್ಚುಹಸಿರಾಗಿ ಕಂಡು ಬರುತ್ತದೆ. ಹಾಗೂ ಅದರಲ್ಲಿನ ವಿವಿಧ ಗಿಡಮರಗಳನ್ನು ಹಾಗೂ ಬಳ್ಳಿಗಳಲ್ಲಿ ಹಸಿರು ಬಣ್ಣಗಳಲ್ಲಿನ ವ್ಯತ್ಯಾಸ ವಿಶಾಲವಾದ ಮರಗಳು ದೂರದ ಮತ್ತು ಸಮೀಪ ವಸ್ತುವಿನಲ್ಲಿನ ಆಕಾರದ ಮತ್ತು ಬಣ್ಣಗಳಲ್ಲಿನ ವ್ಯತ್ಯಾಸಗಳನ್ನು ಸ್ಪಷ್ಟವಾಗಿ ಇಲ್ಲಿ ತೋರಿಸಿದ್ದಾರೆ. ಎಡಬದಿಯಲ್ಲಿರುವ ಗೋಲ್ಮೊಹರ್‌ನ ಮರಗಳನ್ನು ಬುಡದಿಂದ ತುದಿಯವರೆಗೆ ಬಣ್ಣಗಳಲ್ಲಿ ಆಗುವ ಬದಲಾವಣೆಗಳನ್ನು ಇಲ್ಲಿ ವೀಕ್ಷಿಸಬಹುದು. ಮಿಶ್ರ ಬಣ್ಣಗಳಿಂದ ಹಲವು ರೀತಿಯ ವಿವಿಧ ಕೆಂಪು, ಹಳದಿ, ಕೇಸರಿ, ಹಸಿರು ಬಣ್ಣಗಳ ಛಾಯೆಯನ್ನು ರಚಿಸಿದ್ದಾರೆ. ಆ ಮರದಲ್ಲಿರುವ ಹೂವುಗಳನ್ನು ಬಿಡಿಬಿಡಿಯಾಗಿ ನಿರ್ಧಿಷ್ಟವಾದ ನೆರಳು-ಬೆಳಕಿನೊಂದಿಗೆ ರಚಿಸಿದ್ದಾರೆ. ನೋಡುಗರಿಗೆ ಮನಸ್ಸಿಗೆ ಆನಂದ ನೀಡುತ್ತದೆ. ರುಮಾಲೆ ಅವರು ನಿಸರ್ಗ ಚಿತ್ತಣದಲ್ಲಿ ಬಣ್ಣಗಳ ವಿನ್ಯಾಸದಲ್ಲಿ ಹೊಸ ಲೋಕವನ್ನು ಕಾಣುತ್ತಾರೆ. ನೈಜತೆಯ ಅನುಭವಕ್ಕಾಗಿ ಅವರು ಬಣ್ಣಗಳಲ್ಲಿ ತೋರಿಸುವ ವಿಶಿಷ್ಠ ಪ್ರಯೋಗ ಅನನ್ಯವಾದುದ್ದಾಗಿದೆ ಎಂಬುದಕ್ಕೆ ಈ ಚಿತ್ರನಿದರ್ಶನವಾಗಿದೆ.

**ಚಿತ್ರ ೮೫. ತಲಕಾವೇರಿಯ ಉಗಮಸ್ಥಾನ :** ಈ ನಿಸರ್ಗ ಚಿತ್ರಣವನ್ನು ತೈಲವರ್ಣ ಮಧ್ಯಮದಲ್ಲಿ ಕ್ಯಾನವಸಿನ ಮೇಲೆ ಚಿತ್ರಿಸಲಾಗಿದೆ. ರುಮಾಲೆಯವರು ಪ್ರಕೃತಿಯ ಸವಿಯನ್ನು ಸವಿಯಲು ದೇಶದ ನಾನಾ ಭಾಗಗಳಿಗೆ ಸುತ್ತಾಡಿದ ಹಾಗೆ ತಲಕಾವೇರಿಗೂ ಹೋಗಿ ಚಿತ್ರಿಸಿದ ಪ್ರಕೃತಿ ಚಿತ್ರವಿದು. ಇದನ್ನು

ಈಗಲೂ ರುಮಾಲೆಯವರ ಬೆಂಗಳೂರಿನ ಕಲಾಸಂಗ್ರಾಲಯದಲ್ಲಿ ಕಾಣಬಹುದು. ತಲಕಾವೇರಿಯ ಸುಂದರವಾದ ಪರಿಸರವನ್ನು ರುಮಾಲೆಯವರು ಇಲ್ಲಿ ಚಿತ್ರಿಸಿದ್ದಾರೆ. ತಲಕಾವೇರಿಯ ದೇವಾಲಯದ ಒಳಬಾಗದಲ್ಲಿ ಒಂದು ಚಿಕ್ಕ ಕಲ್ಯಾಣಿಯೊಂದನ್ನು ತುಂಬಾ ಸೊಗಸಾಗಿ ಚಿತ್ರಿಸಿದ್ದಾರೆ. ಕಲ್ಯಾಣಿಯ ನೀರನ್ನು ನೀಲಿ ಮತ್ತು ಕೆಂಪು ಬಣ್ಣಗಳಿಗೆ ಬಿಳಿ ಬಣ್ಣವನ್ನು ಮಿಶ್ರಣ ಮಾಡಿ ಚಿತ್ರಕೃತಿಯಲ್ಲಿ ತೋರಿಸಿದ್ದಾರೆ. ನೋಡಲು ತುಂಬಾ ಸುಂದರವಾಗಿ ಮೂಡಿಬಂದಿದೆ.

**ಚಿತ್ರ ೮೬. ನವರಂಗ ಉದ್ಯಾನವನದಲ್ಲಿ ಅರಳಿದ :** ಈ ನಿಸರ್ಗ ಚಿತ್ರಣವನ್ನು ರುಮಾಲೆ ಚೆನ್ನಬಸವಯ್ಯನವರು ತೈಲವರ್ಣ ಮಾಧ್ಯಮದಲ್ಲಿ ಕ್ಯಾನವಸಿನ ಮೇಲೆ ಚಿತ್ರಿಸಿದ ಕಲಾಕೃತಿ ಇದಾಗಿದೆ. ಈ ಕಲಾಕೃತಿಯಲ್ಲಿ ಗೋಲ್ಮೊಹರ್‌ನ ಮರದ ಮೇಲಿನ ಭಾಗವನ್ನು ಅಂದರೆ ಬರಿ ಹೂ, ಎಲೆಗಳನ್ನು ಮಾತ್ರ ಆಯ್ದುಕೊಂಡು ಬಣ್ಣಗಳಲ್ಲಿ ಆಗುವ ಬದಲಾವಣೆಗಳನ್ನು ಬಹಳ ವಿಶೇಷವಾಗಿ ತೋರಿಸಿದ್ದಾರೆ. ಹೂವು ಮತ್ತು ಎಲೆಗಳಲ್ಲಿ ನೆರಳು-ಬೆಳಕಿನ ವೈವಿದ್ಯಮತೆಯನ್ನು ಬಹಳ ಸೂಕ್ಷ್ಮವಾಗಿ ತೋರಿಸಿದ್ದಾರೆ. ಹಿನ್ನೆಲೆಯಲ್ಲಿ ನೀಲಿ ಮತ್ತು ಬಿಳಿಬಣ್ಣದ ಮಿಶ್ರಣವನ್ನು ಲೇಪಿಸಿದ್ದಾರೆ.

**ಚಿತ್ರ ೮೭. ಬೆಂಗಳೂರು ಕಬ್ಬನ್‌ಪಾರ್ಕ್ :** ಈ ಒಂದು ನಿಸರ್ಗ ಚಿತ್ರಣವನ್ನು ಬೆಂಗಳೂರಿನ ಕಬ್ಬನ್ ಪಾರ್ಕ್‌ನಲ್ಲಿಗೆ ಹೋಗಿ, ರಚಿಸಿದ ಕಲಾಕೃತಿಯನ್ನು ತುಂಬಾ ಅದ್ಬುತವಾಗಿ ರಚಿಸಿದ್ದಾರೆ. ಇಲ್ಲಿ ಬಹಳ ದಟ್ಟವಾಗಿ ಬೆಳೆದು ನಿಂತಿರುವ ಮರದ ಪೊದರೆ (ಗುಂಪು)ಗಳನ್ನು ತುಂಬ ಸೊಗಸಾಗಿದೆ ತೋರಿಸಿದ್ದಾರೆ. ಇದರಲ್ಲಿ ಪ್ರತಿಯೊಂದು ಮರಗಳಿಗೂ ವಿಶೇಷವಾದ ಹೊತ್ತು ಕೊಟ್ಟು, ಬಹಳ ಸಹನೆಯಿಂದ ಈ ಕಲಾಕೃತಿಯನ್ನು ಚಿತ್ರಣ ಮಾಡಿದ್ದಾರೆ. ಮರಗಳ ಕೆಳಬಾಗದಲ್ಲಿ ನೆರಳು-ಬೆಕಿನ ವಿನ್ಯಾಸವನ್ನು ತುಂಬಾ ಸೂಕ್ಷ್ಮವಾಗಿ ಕಾಣಬಹುದು. ಯಥಾರ್ಥಗೆ ಹೆಚ್ಚಿನ ಮಹತ್ವವನ್ನು ನೀಡಿದ್ದಾರೆ. ಕೃತಿಯ ಎಡಬದಿಯಲ್ಲಿ ಎರಡು ದೊಡ್ಡ ಮರಗಳನ್ನು ಚಿತ್ರಣ ಮಾಡಿ ಉಳಿದ ಮರದ ಬಡ್ಡೆಗಳನ್ನು ಗುಂಪು-ಗುಂಪಾಗಿ ತೋರಿಸಿದ್ದಾರೆ. ಮರದಲ್ಲಿರುವ ಹೂವು, ಎಲೆಗಳನ್ನು ಬಹಳ ಖಚಿತತೆಯಿಂದ ತೋರಿಸಿದ್ದಾರೆ.

**ಚಿತ್ರ ೮೮. ಬೆಂಗಳೂರಿನ ಕಬ್ಬನ್‌ಪಾರ್ಕ್ :** ರುಮಾಲೆ ಅವರು ಈ ಒಂದು ನಿಸರ್ಗ ಕಲಾಕೃತಿಯನ್ನು ತೈಲಮಾದ್ಯಮದ ಕ್ಯಾನವಾಸಿನ ಮೇಲೆ ಅವರ ಕುಂಚದ ಕೈ ಚಳಕದಿಂದ ರಚಿತವಾದ ಕಲಾಕೃತಿಯಾಗಿದೆ. ಈ ಕಲಾಕೃತಿಯಲ್ಲಿ ಗಿಡ-ಮರಗಳನ್ನು ಬಹಳ ಅದ್ಬುತವಾಗಿ ನೆರಳು-ಬೆಳಕಿನೊಂದಿಗೆ ತೋರಿಸಿದ್ದಾರೆ. ಇದರಲ್ಲಿ ಯಥಾರ್ಥತೆಗೆ ಮಹತ್ವವನ್ನು ನೀಡಿದ್ದಾರೆ. ಈ ಕಲಾಕೃತಿಯಲ್ಲಿ ಸಮಯವನ್ನು ನಿಗದಿಪಡಿಸಿದಂತೆ, ಖಚಿತವಾಗಿ ವರ್ಣಗಳ ಮೂಲಕ ತೋರಿಸಿದ್ದಾರೆ. ಇದರ ಬಲಬದಿಯಲ್ಲಿ ನೆಲದಲ್ಲೇ ಹರಳಿಕೊಂಡಿರುವ ಹಸಿರು ಗಿಡವನ್ನು ನೆರಳು-ಬೆಳಕಿನೊಂದಿಗೆ ತೋರಿಸಿ ಅದರ ಹಿಂಬಾಗದಲ್ಲಿ ಕೇಸರಿ ಬಣ್ಣದ ಹೂವುಗಳನ್ನು ತುಂಬಿದ ಮರವನ್ನು ತೋರಿಸಿ, ಅದರ ಎಡಬದಿಯಲ್ಲೇ ದೊಡ್ಡದಾದ ಮರವೊಂದನ್ನು ತೋರಿಸಿರುವುದು

ಖಚಿತವಾಗಿ ಎಂದು ಹೇಳಬಹುದು. ನೆಲದ ಮೇಲೆ ಆ ಮರಗಳ ನೆರಳನ್ನು ತುಂಬಾ ಅದ್ಭುತವಾಗಿ ತೋರಿಸಿದ್ದಾರೆ. ಒಟ್ಟಾರೆ ಈ ಒಂದು ಕಲಾಕೃತಿಯು ನೋಡುಗರಿಗೆ ಆನಂದ ನೀಡುವಂತಹ ಕಲಾಕೃತಿಯಾಗಿದೆ.

**ಚಿತ್ರ ೮೯. ಕಬ್ಬನ್‌ಪಾರ್ಕ್‌ನ ಹಳದಿ ಹೂವಿನ ಮರ :** ಈ ನಿಸರ್ಗ ಚಿತ್ರಣವನ್ನು ರುಮಾಲೆ ಚೆನ್ನಬಸವಯ್ಯನವರು ೧೯೭೭ರಲ್ಲಿ ತೈಲರ್ಣದ ಮಾಧ್ಯಮದಲ್ಲಿ ಕ್ಯಾನವಾಸಿನ ಮೇಲೆ ತುಂಬಾ ಅಧ್ಭುತವಾಗಿ ಚಿತ್ರಣ ಮಾಡಿದ್ದಾರೆ. ಈ ಕಲಾಕೃತಿಯಲ್ಲಿ ಪ್ರಮುಖವಾಗಿ ಹಳದಿ ಬಣ್ಣದ ಮರವನ್ನು ಚಿತ್ರಣ ಮಾಡಿರುವುದು ಕಂಡುಬರುತ್ತದೆ. ಕಲಾಕೃತಿಯ ಮಧ್ಯಭಾಗದಲ್ಲಿ ಒಂದೇಒಂದು ಮರವನ್ನು ಬೃಹದಾಕಾರವಾಗಿ ತೋರಿಸಿದ್ದಾರೆ. ವಿಶೇಷವೆಂದರೆ ಈ ಒಂದು ಮರದಲ್ಲಿ ಬರಿ ಹಳದಿ ಬಣ್ಣದ ಹೂವುಗಳು ಮಾತ್ರ ಇವೆ. ಒಂದೇ ಒಂದು ಹಸಿರು ಬಣ್ಣದ ಎಲೆಗಳು ಕಾಣುತ್ತಿಲ್ಲ. ಆ ಹಳದಿ ಹೂವುಗಳಲ್ಲಿ ನೆರಳು-ಬೆಳಕಿನ ಸ್ಪಷ್ಟತೆಯನ್ನು ಖಚಿತವಾಗಿ ತೋರಿಸಿದ್ದಾರೆ.

ಮರದ ಕೆಳಭಾಗದಲ್ಲಿ ಹಳದಿ ಹೂವುಗಳು ಬಿದ್ದಿರುವುದು ಮತ್ತು ಇನ್ನೂ ಕೆಲವು ಬೀಳುತ್ತಿರುವುದನ್ನು ತುಂಬಾ ಸ್ಪಷ್ಟವಾಗಿ ತೋರಿಸಿದ್ದಾರೆ. ಅಲ್ಲದೆ ದೂರದಲ್ಲಿ ಇಬ್ಬರು ದಂಪತಿಗಳು ಹೋಗುತ್ತಿರುವ ರೀತಿಯಲ್ಲಿ ಚಿತ್ರಿಸಿದ್ದಾರೆ. ಅವರನ್ನು ಮುಂದುವರೆದು ದೂರದಲ್ಲಿ ಹಸಿರು ಮರಗಳ ಸಾಲುಗಳನ್ನು ತೋರಿಸಿದ್ದಾರೆ. ಒಟ್ಟಿನಲ್ಲಿ ಈ ಕಲಾಕೃತಿಯು ನೋಡುಗರಿಗೆ ಮದನೀಡುವಂತೆ ಕಾಣುತ್ತದೆ.

**ಚಿತ್ರ ೯೦. ಗೋಲ್ಮೊಹರ್-ರಾಜಾಜಿನಗರ :** ಈ ಚಿತ್ರಕಲಾಕೃತಿಯನ್ನು ರುಮಾಲೆ ಅವರು ವಾಸವಿರುವ ನಗರದಲ್ಲೇ ಪಾರ್ಕ್‌ವೊಂದನ್ನು ಆಯ್ದುಕೊಂಡು ಚಿತ್ರಣ ಮಾಡಿದ್ದಾರೆ. ಇಲ್ಲಿ ಗುಂಪು-ಗುಂಪಾದ ಹೂವಿನ ಮರಗಳನ್ನು ತೋರಿಸಿದ್ದಾರೆ. ಆ ಮರಗಳ ಮಧ್ಯಬಾಗದಲ್ಲಿ ಒಂದು ದಾರಿಯನ್ನು ತೋರಿಸಿದ್ದಾರೆ. ಕಲಾಕೃತಿಯ ಮಧ್ಯಭಾಗದಲ್ಲಿ ಹಳದಿ ಬಣ್ಣದ ಹೂವಿನ ಮರವನ್ನು ತುಂಬಾ ಅಂದವಾಗಿ ಚಿತ್ರಣ ರೂಪಿಸಿದ್ದಾರೆ. ಎಡಬದಿಯಲ್ಲಿ ಕೆಳಭಾಗದಲ್ಲಿ ಮರಗಳ ಮಧ್ಯೆ ಒಂದು ಪುಟ್ಟ ಮಂಟಪದಂತೆ ತೋರುತ್ತದೆ. ಇಲ್ಲಿ ನೆರಳು-ಬೆಳಕಿನ ವಿನ್ಯಾಸವನ್ನು ಬಹಳ ಸ್ಪಷ್ಟತೆಯಿಂದ ತೋರಿಸಿದ್ದಾರೆ.

**ಚಿತ್ರ ೯೧. ನಂದಿ ಮತ್ತು ಶಿವಲಿಂಗ :** ಕಲಾವಿದ ರುಮಾಲೆ ಚೆನ್ನಬಸವಯ್ಯನವರು ೧೯೭೮ರಲ್ಲಿ ತೈಲವರ್ಣ ಮಾಧ್ಯಮದಲ್ಲಿ ಕ್ಯಾನವಾಡಿನ ಮೇಲೆ ರಚಿಸಿರುವ ನಂದಿ ಮತ್ತು ಶಿವಲಿಂಗ ಚಿತ್ರಣವು ತುಂಬಾ ಸೊಗಸಾಗಿ ಮೂಡಿಬಂದಿದೆ. ಈ ಕಲಾಕೃತಿಯಲ್ಲಿ ನೆರಳು ಮತ್ತು ಬೆಳಕನ್ನು ಯತಾವತ್ತಾಗಿ ಬಣ್ಣಗಳ ಮೂಲಕ ತೋರಿಸಿದ್ದಾರೆ. ಕಲಾಕೃತಿಯ ಬಲಭಾಗದಲ್ಲಿ ನಂದಿ ಚಿತ್ರವನ್ನು ಹಾಗೂ ಅದರ ಮುಂದೆ ಚಿಕ್ಕದಾಗಿ ಶಿವಲಿಂಗವನ್ನು ಚಿತ್ರಿಸಿದ್ದಾರೆ. ಮಧ್ಯಬಾಗದಲ್ಲಿ ದೊಡ್ಡದಾದ ಶಿವನ ಲಿಂಗಕ್ಕೆ ಹರಿಶಿಣ, ಕುಂಕುಮ ಮತ್ತು ವಿಭೂತಿಯನ್ನು ಬಳಿದು ಹೂ ಲೇಪಿಸಿರುವ ರೀತಿಯಲ್ಲಿ ತೋರಿಸಿದ್ದಾರೆ. ಆದರೆ ಎಡಬದಿಯಲ್ಲಿಯೇ ಹಾಸೀನ ಬಂಡೆಯನ್ನು ತೋರಿಸಿದ್ದಾರೆ. ಹಿಂಬದಿಯಲ್ಲಿ ಕಲ್ಲಿನ ಗೋಡೆಯು

ಕಳಚಿ ಬಿದ್ದಿರುವ ರೀತಿಯಲ್ಲಿ ತೋರಿಸಿದ್ದಾರೆ. ಆ ಗೋಡೆಯ ಹಿಂಬದಿಯ ಮೇಲಿನ ಭಾಗದಲ್ಲಿ ಹಸಿರು ಬಣ್ಣದ ಮರದ ಕೊಂಬೆಗಳನ್ನು ತೋರಿಸಿದ್ದಾರೆ. ಒಟ್ಟಾರೆ ಈ ಕಲಾಕೃತಿಯೂ ನೋಡುಗರಿಗೆ ಭಕ್ತಿಭಾವವನ್ನು ಮೂಡಿಸುವಂತ ಚಿತ್ರಣವಾಗಿದೆ.

**ಚಿತ್ರ ೯೨. ಗುಲ್ಮೊಹರ್ ಹೂವುಗಳ ದೃಶ್ಯ :** ಚಿತ್ರಕಲಾವಿದ ರುಮಾಲೆ ಅವರು ಈ ಕಲಾಕೃತಿಯನ್ನು ೧೯೭೭ರಲ್ಲಿ ಕ್ಯಾನವಸಿನ ಮೇಲೆ ತೈಲಮಾಧ್ಯಮದಲ್ಲಿ ರಚನೆ ಮಾಡಿರುವಂತ ಚಿತ್ರಣವಾಗಿದೆ. ಈ ಚಿತ್ರಣದಲ್ಲಿ ಹೂವಿನ ಮರದ ಮೇಲಿನ ಭಾಗವನ್ನು ಮಾತ್ರ ಆಯ್ದುಕೊಂಡು ಹೂವುಗಳ ನರ್ತನವನ್ನು ಬಣ್ಣಗಳ ಮೂಲಕ ಬಹಳ ಸ್ಪಷ್ಟವಾಗಿ ತೋರಿಸಿದ್ದಾರೆ. ಆ ಹೂವುಗಳ ಮುಂಬಾಗದಲ್ಲಿ ಒಬ್ಬ ಯೋಧನನ್ನು ಕಪ್ಪು-ಬಿಳಿ ಹಾಗೂ ನೀಲಿ ಬಣ್ಣಗಳ ಮಿಶ್ರಣದೊಂದಿಗೆ ರಚನೆ ಮಾಡಿದ್ದಾರೆ. ಹಿನ್ನೆಲೆಯಲ್ಲಿ ಇಲ್ಲಿಯ ಎಲ್ಲಾ ಕಲಾಕೃತಿಗಳು ರುಮಾಲೆ ಕಲಾಗ್ಯಾಲರಿಯಲ್ಲಿ ಸಂಗ್ರಹಗೊಂಡಿವೆ.

**ರುಮಾಲೆಯವರ ವರ್ಣಚಿತ್ರಗಳಲ್ಲಿ ಕಂಡುಬರುವ ಅಂಶಗಳು**

* ಜಲವರ್ಣ ಮತ್ತು ತೈಲವರ್ಣಗಳಲ್ಲಿ ಚಿತ್ರಗಳನ್ನು ರಚಿಸಿದ್ದಾರೆ.
* ರುಮಾಲೆಯವರು ತಮ್ಮ ಮನಸ್ಸಿನ ಪಕ್ವತೆಯ ಭಾವನೆಗಳಿಗೆ ತಕ್ಕಂತೆ ಬಣ್ಣಗಳನ್ನು ಆಯ್ದುಕೊಂಡಿದ್ದಾರೆ.
* ವರ್ಣಚಿತ್ರಗಳು ಸಹೃದಯದ ಮನಸ್ಸನ್ನು ಸೂರಗೊಳ್ಳುವಂತೆ ವರ್ಣಸಂಯೋಜನೆ ರೇಖೆಗಳ ಲಯಾತ್ಮಕತೆ, ರಂಗುಗಳ ಘನತ್ವ, ಕುಂಚಗಳ ಹರಿದಾಟವಿದೆ. ಅದ್ಭುತ ಆಳ ಆಕರ್ಷಕತೆ ಮತ್ತು ಅರ್ಥವಂತಿಕೆಯನ್ನು ಹೊಂದಿದೆ.
* ಅಕೆಡೆಮಿಕ್ ಶೈಲಿಯನ್ನು ರೂಢಿಸಿಕೊಂಡ ರುಮಾಲೆಯವರು ಜಲವರ್ಣಗಳನ್ನು ಪ್ರಯೋಗಿಸಿ ಅಭಿವ್ಯಕ್ತಿಸಿದ ಚಿತ್ರಗಳು ಅನೇಕ ಪಾರದರ್ಶಕ ಚಿತ್ರಗಳಲ್ಲಿ ವರ್ಣದ ಬಿಳುಪನ್ನು ಕುಂಚ ದಿಂದಲೇ ನಿಯಂತ್ರಿಸಿರುವುದನ್ನು ಕಾಣುತ್ತೇವೆ. ಇದರಿಂದ ಜಲವರ್ಣಗಳ ಮೇಲಿನ ಅವರ ಹಿಡಿತ ಹಾಗೂ ಘಾಡಿಮೆಯು ಅರಿವಾಗುತ್ತದೆ.

  ಹಳದಿ, ನೀಲಿ, ಕೆಂಪು ಮತ್ತು ಬಣ್ಣಗಳ ಮಿಶ್ರಣದಿಂದ ಆಕಾಶದ ಮೋಡಗಳನ್ನು ಸುರುಳಿಯಾಕಾರದಲ್ಲಿ ತೋರಿಸಿದ್ದಾರೆ. ನೋಡುಗರಿಗೆ ಆನಂದವನ್ನು ಕೊಡುವಂತ ಚಿತ್ರವಾಗಿದೆ.
* ಭಾವಚಿತ್ರಗಳಲ್ಲಿ ಬಳಸಿದ ಜಲವರ್ಣಗಳು ಚರ್ಮದ ನೈಜ ಅನುಭವ ನೀಡುವದರೊಂದಿಗೆ ಮಾಸದಂತೆ ತಾಜಾತನವನ್ನು ಹೊಂದಿವೆ.

* ರುಮಾಲೆಯವರು ನಿಸರ್ಗ ಚಿತ್ರಗಳನ್ನು ಸ್ವತಂತ್ರವಾಗಿ ರಚಿಸಿರುವುದರ ಜೊತೆಗೆ ಭಾವಚಿತ್ರಗಳಲ್ಲಿ ಹಿನ್ನೆಲೆಯಾಗಿ ನಿಸರ್ಗವನ್ನು ಸಾಕಷ್ಟು ದುಡಿಸಿಕೊಂಡಿದ್ದಾರೆ. ನಮ್ಮ ಭಾರತೀಯ

ಶೈಲಿಯ ಸೊಗಡು ಅದರಲ್ಲಿದೆ. ಗಿಡ, ಮರ, ಬಳ್ಳಿ ಎಲ್ಲವನ್ನು ವಿವರವಾಗಿ ನೈಜವರ್ಣಗಳ ಲೇಪನವನ್ನು ಹೊಂದಿ ನಮ್ಮನ್ನು ಭ್ರಮಾಲೋಕಕ್ಕೆ ಕರೆದೊಯ್ಯುತ್ತವೆ.

* ಜಲವರ್ಣ ನಿಸರ್ಗ ಚಿತ್ರಗಳಲ್ಲಿ ಅನೇಕ ವಸ್ತು ವೈವಿಧ್ಯತೆಯನ್ನು ಕಾಣುತ್ತೇವೆ. ಜೊತೆಗೆ ನೀರು, ಆಕಾಶ, ಪ್ರತಿಬಿಂಬ ಅದರಂತೆ ಬಣ್ಣಗಳ ವೈವಿಧ್ಯತೆಯ ಛಾಯಾ ಮೌಲ್ಯ ದೃಶ್ಯಾಂತರದ ಅನುಭವ ಸ್ಪಷ್ಟವಾಗಿ ಚಿತ್ರಿತವಾಗಿದೆ. ಬಣ್ಣಗಳ ಪಾರದರ್ಶಿಕೆ ವಸ್ತುಗಳ ಗುಣಧರ್ಮಕ್ಕೆ ಮೆರಗು ತಂದಿದೆ.

* ತಮ್ಮದೇ ಆದ ದೇಶೀಯ ಸಂಸ್ಕೃತಿಯ ಅದ್ಯಾತ್ಮಿಕ ನಿಲುವು, ಭಾವಲಾವಣ್ಯ, ಆಳವಾದ ಅನುಭವ, ವಿವರವಾದ ನಿರೂಪಣೆಯನ್ನು ಹೊಂದಿರುವ ವಿಶೇಷ ಕಲಾಕೃತಿಗಳಾಗಿವೆ.

* ಭಕ್ತಿಪ್ರದಾನವಾದ ಭಾವಚಿತ್ರ ಮತ್ತು ದೇವರ ಚಿತ್ರಗಳ ವಾತಾವರ್ಣ ನಿರ್ಮಿಸಲು ನೀಲ ವರ್ಣವನ್ನು ಬಳಸಿ ಚಿತ್ರದಲ್ಲಿ ಸೌಮ್ಯತೆಯನ್ನು ತರುವುದು ವಿಶೇಷವಾಗಿದೆ.

* ತೈಲವರ್ಣ ಚಿತ್ರಗಳನ್ನು ರಚಿಸುವಲ್ಲಿಯೂ ಅಷ್ಟೇ ಪ್ರಭುತ್ವವನ್ನು ಸಾಧಿಸಿದ್ದಾರೆ. ಭಾವಚಿತ್ರ ಗಳಲ್ಲಿ ಜೀವಂತಿಕೆಯನ್ನು ಮೂಡಿಸಿದ್ದಾರೆ. ಒಟ್ಟಾರೆ ವ್ಯಕ್ತಿತ್ವದ ಭಾವನೆಗಳು ಮೂಡಿಸುವುದ ರೊಂದಿಗೆ ತದ್ರೂಪ್ಯತೆಯನ್ನು ಹೊಂದಿವೆ.

* ಭಾವಚಿತ್ರಗಳಲ್ಲಿ ಕಣ್ಣಿನಲ್ಲಿ ಜೀವ-ಚೈತನ್ಯ ತುಂಬಿದ್ದಾರೆ. ಕೂದಲೆಳೆಗಳನ್ನು ಎಳೆ-ಎಳೆಯಾಗಿ ಚಿತ್ರಿಸಿದ್ದಾರಲ್ಲದೆ ಬಟ್ಟೆಗಳ ಮೈವಳಿಕೆಯ ನೈಜತೆಯನ್ನು ಮೆರೆದಿದ್ದಾರೆ. ಅನೇಕ ಚಿತ್ರಗಳಲ್ಲಿ ಕುಂಚದ ನೇರ ಹೊಡೆತಗಳಿಲ್ಲದೇ ಬಣ್ಣಗಳನ್ನು ಬೆರಸಿ ಮೃದುವಾಗಿ ಲೇಪಿಸಿರುವುದನ್ನು ಕಾಣುತ್ತೇವೆ.

* ತೈಲವರ್ಣಗಳ ನಿಸರ್ಗ ಚಿತ್ರಗಳ ಪರಿಣಾಮವನ್ನು ಕಾಣುತ್ತೇವೆ.

* ಇವರ ಚಿತ್ರಗಳು ವಿದೇಶಿ ಪದ್ಧತಿಯ ಕಲಾಶಿಕ್ಷಣದ ರೀತಿಯನ್ನು ಹೊಂದಿದ್ದರೂ ಭಾವನೆಗಳು, ಅನುಭವಗಳು ರುಮಾಲೆಯವರದೆ ಆಗಿದೆ.

**ರುಮಾಲೆ ಅವರ ಒಟ್ಟಾರೆ ಕಲಾಕೃತಿಗಳ ಅಧ್ಯಯನದಿಂದ ಕಂಡುಬರುವ ಪ್ರಮುಖ ಅಂಶಗಳು**

"ಸಾಂಪ್ರದಾಯಿಕ ಕಲೆ ಅಮೂರ್ತರೂಪದ ಆಧುನಿಕತೆ ಎಂಬ ವರ್ಗೀಕರಣ ಇಂದಿನ ಸಮಕಾಲೀನ ಕಲಾ ಸಂದರ್ಭದಲ್ಲಿ ತಾಳಿಬರುತ್ತಿದೆಯಾದರೂ ಕಲಾವಿದರ ವೈಯಕ್ತಿಕ ಮನೋಧರ್ಮದ ಮೇಲೆ ಅವರವರ ಆಯ್ಕೆಯಾಗುತ್ತದೆ. ರುಮಾಲೆಯವರು ನೈಜಕಲೆಯಲ್ಲಿ ಅವರದೇ ಆದ ಒಂದು ವಿಶೇಷವಾದ ಶೈಲಿಯನ್ನು ತೊಡಗಿಸಿಕೊಂಡಿದ್ದಾರೆ. ಯಾವುದೇ ಪರಂಪರೆ ಇಲ್ಲದೆ ಯಾವ ಕಲೆಗಳು ಬೆಳೆಯುವುದಿಲ್ಲ,

ಪರಂಪರೆ ಎನ್ನುವುದನ್ನು ಕಟ್ಟಿಡಕ್ಕಿರುವ ಭದ್ರ ತಳಹದಿ ಇದ್ದಂತೆ. ಇಂದು ಎನ್ನುವುದನ್ನು ನಿನ್ನೆಯದರ ಮುಂದುವರಿಕೆ ಎಂಬುದು ಗಮನಾರ್ಹ ಅಂಶವಾಗಿದೆ.

ರುಮಾಲೆಯವರನ್ನು ಭಾರತೀಯ ವ್ಯಾನ್‌ಗಾಗೂ ಎಂದು ಟಿ.ಪಿ ಇಸರ್‌ರವರು ಒಂದು ಹೇಳುತ್ತಾರೆ. ಅದಕ್ಕೆ ಕಾಣ ಇವರ ಚಿತ್ರಗಳ ವಸ್ತು-ಶೈಲಿ ಪಾಶ್ಚಾತ್ಯ ದೇಶದ ವ್ಯಾನ್‌ಗಾಗೂ ಅವರು ವಪೆಕ್ ಮಾಧ್ಯಮದಲ್ಲಿ ಸಾಕಷ್ಟು ಪ್ರಕೃತಿಯ ಚಿತ್ರಣಗಳನ್ನು ಚಿತ್ರಿಸಿದ್ದಾರೆ. ಹಾಗೂ "ರಾಜಮನೆತನದವರಾಗಿದ್ದ ರವಿವರ್ಮರು ದೇವದೇವತೆಗಳ ಚಿತ್ರಗಳನ್ನು ಜನಸಾಮಾನ್ಯರಿಗೆ ಪ್ರಯೋಗವಾಗುವಂತೆ ರಚಿಸಿ ಪ್ರಸಿದ್ಧರಾದರು. ಇಂತಹ ನೈಜ ಕಲೆಯ ಪರಂಪರೆಯಲ್ಲಿ ನಡೆದವರು ಎಸ್.ಎಂ. ಪಂಡಿತ, ಜಿ.ಎಸ್. ದಂಡಾವತಿಮಠ, ಎಂ.ಎ. ಚಿಟ್ಟಿ, ಡಿ.ವ್ಹಿ. ಹಾಲಭಾವಿ, ಡಿ.ಜಿ. ಬಡಿಗೇರ, ಸಿ.ವಿ. ಕಾರಡಗಿ, ಎಂ.ವಿ. ಮಿಣಜಗಿ, ವೈ. ಸುಬ್ರಹ್ಮಣ್ಯರಾಜು, ಎನ್. ಹನುಮಯ್ಯ, ಎಂ.ಟಿ.ವಿ. ಆಚಾರ್ಯ, ಪಾವಂಜೆ, ನಂಜುಂಡಸ್ವಾಮಿ, ಎಸ್.ಎನ್. ಸ್ವಾಮಿ, ಪಿ.ಆರ್. ತಿಪ್ಪೇಸ್ವಾಮಿ ಇನ್ನೂ ಅನೇಕರು. ಕಲಾಪರಂಪರೆಯನ್ನು ಉಳಿಸಿ ಬೆಳೆಸಿದ್ದಾರೆ. ಅವರಲ್ಲಿ ಒಬ್ಬರಾಗಿ ರುಮಾಲೆಚೆನ್ನಬಸವಯ್ಯನವರು ಒಬ್ಬರು.

ರುಮಾಲೆಯವರಿಗೆ ಬರಿ ನಿಸರ್ಗ ಚಿತ್ರಕಾರ ಮತ್ತು ನೈಜಕಲಾ ಪರಂಪರೆಯ ಕಲಾವಿದರೆನ್ನುವ ಅಪವಾದ. ಆದರೆ ಪರಂಪರೆ ಇಲ್ಲದೆ ಯಾವುದನ್ನೂ ಅರಿತುಕೊಳ್ಳಲು ಸಾಧ್ಯವಿಲ್ಲ. ವಚನಕಾರರಾದ ಅಲ್ಲಮ ಪ್ರಭುಗಳು ಹೇಳುವಂತೆ ಹಿಂದಣ ಹೆಜ್ಜೆಯನರಿತಲ್ಲದೆ ನಿಂದ ಹೆಜ್ಜೆಯನರಿಯಬಾರದು ಅಂದರೆ ವರ್ತಮಾನ ಚನ್ನಾಗಿ ಅರಿಯಬೇಕಾದರೆ ಪರಂಪರೆಯನ್ನು ಚೆನ್ನಾಗಿ ಅರಿತಿರಬೇಕಾಗುತ್ತದೆ. ಅನ್ನುವ ಮಾತು ಎಲ್ಲಾ ಕ್ಷೇತ್ರಗಳಿಗೂ ಅನ್ವಯಿಸುತ್ತದೆ. ಈ ನೈಜಕಲಾ ಸ್ವರೂಪಗಳು ಪ್ರಪಂಚದ ಇತಿಹಾಸವನ್ನು ಸಮರ್ಥವಾಗಿ ನಿರೂಪಿಸಿದೆ. ಈ ಕಲಾಭಂಡಾರವಿಲ್ಲದೆ ಅಂದಿಗೂ ನವ್ಯ (ಅಮೂರ್ತ ವಿರೂಪತೆಯ, ತಿರುಚಿದ ಅನ್ನುವ ಭಾವನೆಯಿಂದ ಕೂಡಿದ್ದು) ಶೈಲಿಯೇ ಇದ್ದಿದ್ದರೆ ನಾವು ಇತಿಹಾಸದ ಸತ್ಯಚಿತ್ರವನ್ನು ಹಿಂದಿನ ಸಂಸ್ಕೃತಿಯನ್ನು ಗುರುತಿಸಲು ಸಾಧ್ಯವಾಗುತ್ತಿತ್ತೇ ಎನ್ನುವ ಎಂ.ಬಿ.ವಿ. ಆಚಾರ್ಯರ ಮಾತು ಸತ್ಯವಾಗಿದೆ.

ರುಮಾಲೆ ಅವರು ತಮ್ಮ ಕಣ್ಣಲ್ಲಿ, ಮನಸ್ಸಿನಲ್ಲಿ, ಜೀವನದ ಕಣ-ಕಣದಲ್ಲಿ ತುಂಬಿಕೊಂಡ ಕಲೆಗೆ ತಮ್ಮ ವಿಶಿಷ್ಟ ಮೆರಗು ಕೊಟ್ಟು ಆಹ್ಲಾದಕರವಾದ ರೀತಿಯಲ್ಲಿ ಚಿತ್ರಿಸಿ ಒಂದು ಹೊಸ ಸೃಷ್ಟಿ ಮಾಡಿ ನಿಲ್ಲಿಸಿರುತ್ತಾರೆ. ನಿಸರ್ಗದೃಶ್ಯ, ಭಾವಚಿತ್ರ, ದೇವರಚಿತ್ರಗಳನ್ನು ಅವರು ಚಿತ್ರಿಸುವ ಚಿತ್ರಜೀವ ತುಂಬಿಕೊಂಡು ವರ್ಣಗಳಲ್ಲಿ ಮೂಡಿಬಂದಿರುವುದಕ್ಕೆ ಅದು ಅವರ ಮನಸ್ಸಿನಲ್ಲಿ ಮೊದಲು ನಿರ್ಮಾಣ ಗೊಂಡಿರುವುದೇ ಕಾರಣವಾಗಿದೆ. ಅವರು ತಮ್ಮನ್ನು ಸಂಪೂರ್ಣವಾಗಿ ಅದಕ್ಕೆ ಅರ್ಪಿಸಿಕೊಂಡಿರುವುದ ರಿಂದಲೇ ಕಲಾಕೃತಿ ಸಮಗ್ರವಾಗಿ ಸಂಪೂರ್ಣಗೊಂಡು ಹೊರಬರಲು ಸಾಧ್ಯವಾಗಿದೆ.

## ಅಧ್ಯಾಯ ಐದು

# ರುಮಾಲೆ ಅವರ ಕಲಾಕೃತಿಗಳ ಮೇಲಾದ ಪ್ರಭಾವ ಪ್ರೇರಣೆ ರಚನಾ ಶೈಲಿ ತಂತ್ರಗಾರಿಕೆ

"ಭಾರತೀಯ ಚಿತ್ರಕಲೆಗೆ ಪ್ರಪಂಚದಲ್ಲಿ ವಿಶಿಷ್ಟಸ್ಥಾನವಿದೆ. ಸಾವಿರಾರು ವರ್ಷಗಳ ವೈವಿಧ್ಯಮಯ ಸಂಸ್ಕೃತಿ, ನಾಗರಿಕತೆ ಮತ್ತು ಪರಂಪರೆ ಹೊಂದಿದ ನೆಲೆವೀಡು ಭಾರತ, ಹೀಗಾಗಿ ಇಲ್ಲಿಯ ಕಲೆಗೆ ಹತ್ತು ಹಲವು ಮುಖಗಳು. ಈ ಪರಂಪರೆ ಆದಿಮಾನವನಿಂದ ಆರಂಭಗೊಂಡು ಇಂದಿನ ಆಧುನಿಕ ಮನುಷ್ಯನ ತನಕ ಹಾಸಿಕೊಂಡಿದೆ. ಉನ್ನತ ಕಲಾವಂತಿಕೆ ಭಾರತೀಯ ಕಲೆಯ ಮೂಲ ಗುಣ, ವಿಭಿನ್ನ ಧರ್ಮ ನಡವಳಿಕೆ, ಆಚರಣೆ ನಮ್ಮ ಕಲೆಯನ್ನು ಶ್ರೀಮಂತಗೊಳಿಸಿವೆ. ಬಹುಶಃ ಇಲ್ಲಿರುಷ್ಟು ಸಂಕೀರ್ಣವಾದ ವೈವಿಧ್ಯಮಯ ಬದುಕು ರೂಢಿ ಜಗತ್ತಿನಲ್ಲಿ ಇನ್ನೆಲ್ಲಿಯೂ ಸಿಗದು. ಅದಕ್ಕೆ ಇಲ್ಲಿಯ ಪ್ರಾಚೀನ ಕಲೆಯ ಇಂದಿನ ಆಧುನಿಕ ಕಲೆಯವರೆಗೆ ಹಲವು ಶೈಲಿ ತಂತ್ರ ಸಿದ್ಧಾಂತಗಳನ್ನು ಒಳಗೊಂಡು ಬೆಳೆಯುತ್ತ ಬಂದಿದೆ. ಸಮೃದ್ಧಿಗೊಂಡಿದೆ."[೧] ನಮ್ಮ ಭಾರತೀಯ ಸಮೃದ್ಧಿಯಾದ ಚಿತ್ರಕಲಾ ಕ್ಷೇತ್ರದಲ್ಲಿ ರುಮಾಲೆಯವರು ತಮ್ಮದೇ ಆದ ರೇಖಾವಿನ್ಯಾಸ ವರ್ಣಗಾರಿಕೆ, ತಂತ್ರ ಹಾಗೂ ಶೈಲಿಯ ವಿಶಿಷ್ಟ ಕೊಡುಗೆಯನ್ನು ನೀಡಿ ಕಲಾಕೃತಿಗಳು ಜನಮನವನ್ನು ಸೂರೆಗೊಳ್ಳುವಂತೆ ಮಾಡಿದ ಈ ಶತಮಾನದ ಒಬ್ಬ ಪ್ರಮುಖ ಕಲಾವಿದರು. ಅವರದೇ ಆದ ಶೈಲಿ. ಅಭಿವ್ಯಕ್ತಿ ನಿರೂಪಣೆ ಹಾಗೂ ವಿಭಿನ್ನ ವೈಶಿಷ್ಟ ಗಳನ್ನು ನಾವು ಅವರ ಈ ಎಲ್ಲಾ ಕಲಾಕೃತಿಗಳ ಅಧ್ಯಯನದಿಂದ ತಿಳಿದುಕೊಳ್ಳಲು ಸಾಧ್ಯವೆಂದು ಹೇಳಬಹುದು.

---

೧. ಚಿತ್ರಕಲಾವಿದ ಡಿ.ವಿ. ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು, ಎಂ.ಫಿಲ್, ಪ್ರಬಂಧ, ೨೦೦೫, ಪು.೭೮

“ಇತಿಹಾಸ ಪೂರ್ವಕಾಲದ ಚಿತ್ರಗಳ ಸೃಷ್ಟಿಯ ಹಿಂದಿನ ಹಾಗೂ ಆನಂತರದ ಹಾಗೂ ಇಂದಿನ ಸಮಕಾಲೀನ ಕಲಾ ಕೃತಿಯ ಆಶಯಗಳು ಒಂದೇ ಆಗಿಲ್ಲ. ಹಾಗಾಗುವುದು ಸಾಧ್ಯವೇ ಇಲ್ಲ. ವಿವಿಧ ಸಂದರ್ಭಗಳು ವೈವಿದ್ಯಮಯವಾದ ಚಿತ್ರ, ಶಿಲ್ಪ, ಗ್ರಾಫಿಕ್ ಇತ್ಯಾದಿಗಳನ್ನು ನೋಡುವುದು ಅನುಭವಿಸುವುದು ಸಾಧ್ಯವಾಗಿದೆ”[೨] ಅದರಂತೆಯೇ ಚಟ್ಟಿಯವರು ಆಶಯಗಳು, ಸಂದರ್ಭಗಳು, ಉದ್ದೇಗಳು ಆ ಕಾಲದ ಮೌಲ್ಯವನ್ನು ಕಲಾಕೃತಿಗಳಲ್ಲಿ ಎತ್ತಿಹಿಡಿದಿರುವುದನ್ನು ಕಾಣಬಹುದು.

“ಯಾವುದೇ ಕಲೆ ಕಲಾವಿದನ ವ್ಯಕ್ತಿತ್ವದ ಪ್ರಕಟಣೆ ಯಾಗುವುದು ಮುಖ್ಯತಂತ್ರ ಮಂತ್ರ ಯಾವುದಾದರೇನು? ಪೂರ್ವದೇಶಗಳ ಕಲೆಯ ಗುಣಾಂಶಗಳನ್ನೇ ಸೇರಿಕೊಂಡು ಪಶ್ಚಿಮದ ಕಲಾಪ್ರಪಂಚದಲ್ಲಿ ಸರ್ವಯಾವುವೂ, ಸರ್ವೆ ಸಾಮಾನ್ಯವೂ ಎನಿಸುವ ತಾಂತ್ರಿಕ ಕೌಶಲ್ಯ ಹಾಗೂ ವೈಚಾರಿಕ ನಿಶ್ಯಂಖಲತೆ, ಇವೆರಡನ್ನೊ ಸಮನ್ವಯಗೊಳಿಸಿ ಅವಿರ್ಭವಿಸುವ ವ್ಯಕ್ತಿ ಮೂಲವಾದ ಕಲಾಯೋಗವೇ ಭಾರತೀಯ ಕಲಾವಿದನ ಸಿದ್ಧಿ ಎನಿಸುವುದು”[೩] ಎನ್ನುವಂತೆ ರುಮಾಲೆ ಚನ್ನಬಸವಯ್ಯ ಪಾಶ್ಚಾತ್ಯ ಪದ್ಧತಿಯಲ್ಲಿ ಕಲಾಭ್ಯಾಸ ಮಾಡಿದರೂ ತಮ್ಮ ಕಲಾಕೃತಿಗಳನ್ನು ದೇಶಿಯತೆಯ ಸೊಗಡನ್ನು ಅಭಿವ್ಯಕ್ತಿಸಿದ ರೀತಿ ಅನುಪಮಾವಾಗಿದೆ. ಸಂವೇದನೆಯ ನೆಲೆಗಳು ಬದುಕಿನ ವಿವಿಧ ಘಟ್ಟಗಳಲ್ಲಿ ವಿಭಿನ್ನ ಸಂವೇದನೆಗಳಿಗೆ ಒಳಗಾಗಿ ವೈವಿದ್ಯಮಯವಾಗಿ ಸೃಷ್ಟಿಸುವಂತೆ”[೪] ರುಮಾಲೆ ಚನ್ನಬಸವಯ್ಯ ನವರ ಕಲಾಕೃತಿಗಳಲ್ಲೂ ಈ ವೈವಿದ್ಯತೆಯನ್ನು ಕಾಣುತ್ತೇವೆ. ರುಮಾಲೆಯವರು ತಮ್ಮ ಈ ೭೮ವರ್ಷಗಳ ಜೀವನಾವಧಿಯಲ್ಲಿ ಚಿತ್ರಗಳ ರಚನೆಗೆ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡವರು ನೂರಾರು ಚಿತ್ರಗಳನ್ನು ರಚಿಸಿದ್ದಾರೆ. ಈ ಕಲಾ ಕೃತಿಗಳು ಅವರ ಕಲಾ ಸಾಧನೆಯ ಪ್ರತೀಕಗಳಾಗಿವೆ.

**ವರ್ಣಗಾರಿಕೆ**

ರುಮಾಲೆಯವರ ವರ್ಣಗಾರಿಕೆಯು ತುಂಬಾ ಕುತೂಹಾಲಕಾರಿಯಾದದ್ದು, ಜಲವರ್ಣ ತೈಲವರ್ಣ ಎರಡರಲ್ಲೂ ಮಹತ್ವದ ಸಾಧನೆಯನ್ನು ಗೈದವರು. ಜಲವರ್ಣವನ್ನು ಬಹಳಷ್ಟು ದುಡಿಸಿಕೊಂಡು ಅನೇಕ ಚಿತ್ರಗಳನ್ನು ರಚಿಸಿದ್ದಾರೆ. ಭಾವಚಿತ್ರಗಳನ್ನೇ ಆಗಲಿ, ನಿಸರ್ಗಚಿತ್ರವೇ ಆಗಲಿ ಆಯಾಗುಣ ಧರ್ಮಕ್ಕೆ ತಕ್ಕಂತೆ ನೋಡುಗನ ಮನಸ್ಸಿನಲ್ಲಿ ಭಾವನೆಗಳನ್ನು ಉದ್ದೀಪನಗೊಳಿಸುವ ತಂತ್ರಗಾರಿಕೆ ಈ ಚಿತ್ರಗಳ ವರ್ಣಗಳಲ್ಲಿ ನೋಡಬಹುದು.

---

೨. ಚಿತ್ರಕಲಾವಿದ ಡಿ.ವಿ. ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು, ಎಂ.ಫಿಲ್, ಪ್ರಬಂಧ, ೨೦೦೫, ಪು.೭೮

೩. ಲಕ್ಷ್ಮಿದೇವಿ ಗವಾಯಿ, ಎಂ.ಎ. ಚಟ್ಟಿಯವರ ಜೀವನ ಮತ್ತು ಕಲಾಕೃತಿಗಳು, ಪು.

೪. ಅದೇ. ಪು



ಪ್ರಕೃತಿಯ ದೃಶ್ಯ



ಶ್ರೀಲಂಕಾದ ಒಂದು ನೋಟ



ಬೆಂಗಳೂರು ರಸ್ತೆಯ ಬದಿಯ ನೋಟ



ಕೊಡಲಸಂಗಮ ನಿಸರ್ಗ ದೃಶ್ಯ



ಲಾಲ್‌ಬಾಗ್ ಚಿತ್ರ



ಪ್ರಕೃತಿಯ ಒಂದು ದೃಶ್ಯ



ಪ್ರಕೃತಿಯ ಒಂದು ದೃಶ್ಯ

ಜಲವರ್ಣ



ಕಬ್ಬನ್ ಪಾರ್ಕ್‌ನ ಒಂದು ದೃಶ್ಯ



ಶ್ರೀ ಮಂಚೀದೇವರು



ಹೈಕೋರ್ಟ್ ಹತ್ತಿರದ ಹಳದಿ ಹೂವಿನ ಮರ



ಪ್ರಕೃತಿಯ ಚಿತ್ರ



ಗೊಲ್ಮೊಹರ್ ಸಾಲುಮರಗಳು

ತೈಲವರ್ಣ

**ಜಲವರ್ಣ ಚಿತ್ರಗಳಲ್ಲಿಯ ವರ್ಣಗಾರಿಕೆ**

**ಚಿತ್ರ ೧. ಶ್ರೀಲಂಕಾ ಬೀಚ್ :** ಇದೊಂದು ಶ್ರೀಲಂಕಬೀಚ್‌ನ ನಿಸರ್ಗ ಚಿತ್ರಣ ಈ ಚಿತ್ರದಲ್ಲಿ ನದಿಯ ನೀರು ತುಂಬಾದೂರದಲ್ಲಿ ಕಾಣುವಂತಿದೆ. ಆ ನೀರಿನ ಅಲೆಗಳು ಅದರ ದಡಕ್ಕೆ ಬಂದು ತಾಕಿದಂತೆ ಭಾಸವಾಗುವುದು. ಕಲಾಕೃತಿಯ ಎಡಬದಿಯಲ್ಲಿ ದೂರಕ್ಕೆ ಬಂದು ಕಾಲಿ ಇರುವ ಒಂದು ದೋಣಿಯನ್ನು ತೋರಿಸಿದ್ದಾರೆ. ಆ ದೋಣಿಯಲ್ಲಿ ಯಾರು ವ್ಯಕ್ತಿಗಳಲ್ಲಿ, ಇನ್ನು ಮುಂಭಾಗದಲ್ಲಿ ಮರಳಿನ ಮೈವಳಿಕೆಯನ್ನು ಪ್ರಮುಖ ಬೆಳಕು ನೀಡುವುದರೊಂದಿಗೆ ಜೀವಂತಿಕೆಯನ್ನು ಮೂಡಿಸಿದ್ದಾರೆ. ರುಮಾಲೆಯವರ ಜಲವರ್ಣದ ಮೇಲಿನ ಹಿಡಿತ ಇಲ್ಲಿ ಮನವರಿಕೆ ಆಗುತ್ತದೆ. ಮರಳಿನ ಮೈವಳಿಕೆಯನ್ನು ಕುಂಚಗಳ ಎಳತದಿಂದ ವರ್ಣಛಾಯೆಯನ್ನು ನಿರ್ಮಿಸಿದ್ದಾರೆ. ಹಿನ್ನೆಲೆಯಲ್ಲಿ ನೀಲಿ ಬಣ್ಣದೊಂದಿಗೆ ಹಳದಿ ಬಣ್ಣವನ್ನು ಬೆರೆಸಿ ತಿಳಿಯಾಗಿ ಲೇಪನಮಾಡಿದ್ದಾರೆ. ಈ ಕಲಾಕೃತಿಯು ನೋಡಗರಿಗೆ ಆನಂದವನ್ನು ಉಂಟು ಮಾಡುವಂತಿದೆ.

**ಚಿತ್ರ ೨. ಪ್ರಕೃತಿಯ ದೃಶ್ಯ :** ಈ ಒಂದು ಕಲಾಕೃತಿಯನ್ನು ರುಮಾಲೆ ಚನ್ನಬಸವಯ್ಯನವರು ೧೯೮೭ರಲ್ಲಿ ರಚಿಸಿರುವ ಕಲಾಕೃತಿ ಇದಾಗಿದೆ. ಈ ಕಲಾಕೃತಿಯನ್ನು ರುಮಾಲೆಯವರು ಎತ್ತರದ ಸ್ಥಳದಲ್ಲಿ ಕುಳಿತು ಬರೆದಿರುವಂತ ಚಿತ್ರಣವಾಗಿದೆ. ಮತ್ತು ಯಥಾರ್ಥದರ್ಶನಕ್ಕೆ ಪೂರಕವಾಗಿದೆ. ಕಲಾಕೃತಿಯ ಮುಂಭಾಗದಲ್ಲಿ ಗಿಡ-ಮರಗಳನ್ನು ಹಳದಿ, ಹಸಿರು, ಮತ್ತು ನೀಲಿ ಬಣ್ಣಗಳಿಂದ ನೆರಳು ಮತ್ತು ಬೆಳಕಿನೊಂದಿಗೆ ತೋರಿಸಿದ್ದಾರೆ. ಹಿಂಬದಿಯಲ್ಲಿ ನೆಲಕ್ಕೆ ಕಂದು ಬಣ್ಣವನ್ನು ಬಳಸಿಕೊಂಡಿದ್ದಾರೆ. ಬೆಟ್ಟಗುಡ್ಡಗಳಿಗೆ ನೀಲಿ, ಹಸಿರು, ಕಂದು ಗೆಂಪು ಮಿಶ್ರಿತ ಬಣ್ಣಗಳನ್ನು ಬಳಸಿಕೊಂಡಿದ್ದಾರೆ. ಹಿನ್ನಲೆಯಲ್ಲಿ ಮೊಡದ ಮೈವಳಿಕೆಯ ಹಿರಿಮೆಯನ್ನು ಮೆರೆದಿರುವ ಇಂತಹ ಬದಲಾವಣೆಗಳನ್ನು ಇಲ್ಲಿ ಕಾಣುತ್ತೇವೆ. ಒಟ್ಟಾರೆ ಈ ಕಲಾಕೃತಿಯನ್ನು ಗಮನಿಸಿದಾಗ ಬಹು ಎತ್ತರವಾದ ಪ್ರದೇಶದಲ್ಲಿ ನಿಂತು ಈ ದೃಶ್ಯವನ್ನು ವೀಕ್ಷಣೆ ಮಾಡುತ್ತೇವೆ ಎಂಬಂತೆ ಕಾಣುಸಿಗುತ್ತದೆ.

**ಚಿತ್ರ ೩. ಶ್ರೀಲಂಕದ ಒಂದು ನೋಟ :** ರುಮಾಲೆ ಚನ್ನಬಸವಯ್ಯನವರು ೧೯೭೩ರಲ್ಲಿ ಒಮ್ಮೆ ಶ್ರೀಲಂಕಕ್ಕೆ ಬೇಟಿಕೊಡುವ ಸಂದರ್ಭದಲ್ಲಿ ಈ ಒಂದು ಕಲಾಕೃತಿಯನ್ನು ರಚಿಸಿರಬಹುದು. ಈ ಕಲಾಕೃತಿಯು ಜಲವರ್ಣ ಮಾಧ್ಯಮದಲ್ಲಿ ರಚನೆಯಾಗಿದೆ. ಈ ಕೃತಿಯನ್ನು ರಚನೆ ಮಾಡುವ ಸಂದರ್ಭದಲ್ಲಿ ಆ ಕಲಾವಿದರು ತುಂಬಾ ದೂರದ ಸ್ಥಳದಲ್ಲಿ ಕುಳಿತು ರಚಿಸಿರುವ ಚಿತ್ರಕೃತಿಯಾಗಿದೆ. ಕಲಾವಿದ ಕುಳಿತಿರುವ ಸ್ಥಳಕ್ಕೂ ದೃಶ್ಯದ ಸ್ಥಳಕ್ಕೂ ತುಂಬಾ ಅಂತರವಿದೆ ಎಂದು ಈ ಕೃತಿಯಲ್ಲಿ ತಿಳಿದುಬರುತ್ತದೆ. ಈ ಚಿತ್ರಕಲಾಕೃತಿಯಲ್ಲಿ ಒಂದು ಕೆರೆಯ ನೀರನ್ನು ತೋರಿಸಿ ಆ ನೀರಿನ ಮದ್ಯೆ ಸ್ವಲ್ಪಭಾಗ ದಡವನ್ನು ತೋರಿಸಿದ್ದಾರೆ. ಆದಡದಲ್ಲಿ ಎರಡು ಕಪ್ಪನೆಯ ಪ್ರಾಣಿಗಳು ನಿಂತಿವೆ. ಆ ಪ್ರಾಣಿಗಳ ಮುಂದೆ ಮತ್ತಷ್ಟು ಪ್ರಾಣಿಗಳು ಸಾಲುಸಾಲಾಗಿ ನಿಂತಿರುವುದು ಕಂಡುಬರುತ್ತದೆ. ಕಲಾಕೃತಿಯ

ಬಲ ಮತ್ತು ಎಡ ಬದಿಯಲ್ಲಿ ಹಸಿರು, ಹಳದಿ, ನೀಲಿ ಮಿಶ್ರಿತ ಬಣ್ಣಗಳಿಂದ ಗಿಡಮರಗಳನ್ನು ತೋರಿಸಿದ್ದಾರೆ. ಹಿನ್ನೆಲೆಯಲ್ಲಿ ಆಕಾಶ ನೀಲಿಯನ್ನು ಮೈವಳಿಕೆಯೊಂದಿಗೆ ತೋರಿಸಿದ್ದಾರೆ. ನೋಡುಗರ ಮನಸ್ಸಿಗೆ ಆನಂದವನ್ನು ಉಂಟು ಮಾಡುವಂತಿದೆ.

**ಚಿತ್ರ ೫. ಕೂಡಲ ಸಂಗಮದ ನಿಸರ್ಗ ದೃಶ್ಯ :** ಈ ಚಿತ್ರ ಕಲಾಕೃತಿಯನ್ನು ರುಮಾಲೆ ಚನ್ನಬಸವಯ್ಯನವರು ಕೂಡಲ ಸಂಗಮಕ್ಕೆ ಹೋದಾಗ ಅಲ್ಲೊಂದು ಸ್ಥಳದಲ್ಲಿ ಕುಳಿತು ರಚಿಸಿರುವಂತಹ ಮತ್ತೊಂದು ಕಲಾಕೃತಿ ಇದಾಗಿದೆ. ಈ ಚಿತ್ರಕಲಾಕೃತಿಯಲ್ಲಿ ನೆಲದ ಭಾಗವನ್ನು ತೋರಿಸಿದ, ಮರಗಳ ಅರ್ಧದಿಂದ ಮೇಲಕ್ಕೆ ಚಿತ್ರಣ ಮಾಡಲು ತೆಗೆದುಕೊಂಡಿದ್ದಾರೆ. ಈ ಕಲಾಕೃತಿಯ ಬಲಭಾಗದಲ್ಲಿ ಹಸಿರು ಬಣ್ಣದ ಒಂದು ಮರವನ್ನು ರಚಿಸಿದ್ದಾರೆ. ಈ ಎರಡರ ಮಧ್ಯಭಾಗದಲ್ಲಿ ಕೇಸರಿ ಬಣ್ಣದ ಹೂವಿನ ಮರವನ್ನು ತೋರಿಸಿದ್ದಾರೆ. ಇಲ್ಲಿಯ ಎಲ್ಲಾ ಗಿಡಮರಗಳಿಗೂ ಬಿಳಿ ಬಣ್ಣ ಮಿಶ್ರಣದಿಂದ ಬೆಳಕಿನ ಛಾಯೆಯನ್ನು ತೋರಿಸಿದ್ದಾರೆ. ಹಿನ್ನೆಲೆಯನ್ನು ಗಮನಿಸಿದರೆ ಆ ಮರಗಳ ಹಿಂಭಾಗದಲ್ಲಿ ಮೋಡಗಳನ್ನು ವಿಶಿಷ್ಟವಾದ ಮೈವಳಿಕೆಯಿಂದ ರಚನೆ ಮಾಡಿದ್ದಾರೆ. ನೋಡುಗರ ಸಹೃದಯರಿಗೆ ಮುದನೀಡುವಂತಹ ಕಲಾಕೃತಿಯಾಗಿದೆ.

**ಚಿತ್ರ ೬. ಲಾಲ್‌ಬಾಗ್‌ನ ಚಿತ್ರ :** ರುಮಾಲೆ ಚನ್ನಬಸವಯ್ಯನವರು ಈ ಚಿತ್ರಕಲಾಕೃತಿಯನ್ನು ೧೯೮೭ರಲ್ಲಿ ರಚಿಸಿರುವಂತಹ ಪ್ರಕೃತಿಯ ಚಿತ್ರಣವಾಗಿದೆ. ಈ ಒಂದು ಕಲಾಕೃತಿಯಲ್ಲಿ ಕೆಂಪು, ನೀಲಿ, ಕೇಸರಿ, ಬಣ್ಣಗಳ ಹೂವಿನ ಮರಗಳ ಚಿತ್ರಣವನ್ನು ತುಂಬಾ ಸೊಗಸಾಗಿ ಚಿತ್ರಿಸಿದ್ದಾರೆ. ಕಲಾಕೃತಿಯ ಎಡಬದಿಯಲ್ಲಿ ಕೇಸರಿ ಬಣ್ಣದ ಹೂವಿನ ಮರವೊಂದನ್ನು ಎತ್ತರದಲ್ಲಿ ತೋರಿಸಿ ಅದರ ಕೊಂಬೆರಂಬೆ ಗಳನ್ನು ನೆರಳು ಬೆಳಕಿನೊಂದಿಗೆ ತೋರಿಸಿದ್ದಾರೆ. ಆ ಹೂವಿನ ಸ್ಪಷ್ಟತೆಯನ್ನು ನೆರಳು ಬೆಳಕಿನೊಂದಿಗೆ ತುಂಬಾ ಅದ್ಭುತವಾಗಿ ತೋರಿಸಿದ್ದಾರೆ. ಈ ಎರಡು ಮರಗಳ ಮಧ್ಯಭಾಗದಲ್ಲಿ ನೀಲಬಣ್ಣದ ಹೂವಿನ ಮರವೊಂದನ್ನು ತೋರಿಸಿದ್ದಾರೆ. ಇಡಿ ಆ ಮರವನ್ನು ನೀಲಿ ಬಣ್ಣದಿಂದ ತೋರಿಸಿದ್ದಾರೆ. ಈ ಕಲಾಕೃತಿಯನ್ನು ನೋಡಿದರೆ ಯಾವುದೋ ಒಂದು ಬೃಂದಾವನಕ್ಕೆ ಹೋದಂತೆ ಅನುಭವವಾಗುತ್ತದೆ.

**ಚಿತ್ರ ೭. ಪ್ರಕೃತಿಯ ಒಂದು ದೃಶ್ಯ :** ರುಮಾಲೆ ಚನ್ನಬಸವಯ್ಯನವರು ಈ ಚಿತ್ರಕಲಾಕೃತಿಯನ್ನು ೧೯೮೫ರಲ್ಲಿ ಈ ನಿಸರ್ಗ ಚಿತ್ರಣವನ್ನು ರಚನೆಮಾಡಿದ್ದಾರೆ. ಈ ಒಂದು ಕಲಾಕೃತಿಯಲ್ಲಿ ನೀಲಿಬಣ್ಣವನ್ನೆ ಪ್ರಮುಖವಾಗಿ ಬಳಸಿಕೊಂಡಿದ್ದಾರೆ. ಕಲಾಕೃತಿಯ ಮುಂಭಾಗದಲ್ಲಿ ಎತ್ತರದ ಸ್ಥಳದಂತೆ ತೋರಿಸಿದ್ದಾರೆ. ಆ ಸ್ಥಳದಲ್ಲಿ ಗಿಡಮರಗಳನ್ನು ಅವರದೇ ಆದ ಶೈಲಿಯಲ್ಲಿ ಚಿತ್ರರಚನೆ ಮಾಡಿದ್ದಾರೆ. ಇದರ ಹಿಂಬದಿಯಲ್ಲೆ ನದಿಯ ರೀತಿಯಲ್ಲಿ ನೀರಿನ ಆಕಾರವನ್ನು ತೋರಿಸಿದ್ದಾರೆ. ಆ ನದಿ ನೀರಿನ ದಡದಲ್ಲೇ ನೀಲಿ ಬಣ್ಣಗಳಿಂದ ಬೆಟ್ಟಗುಡ್ಡಗಳನ್ನು ತೋರಿಸಿದ್ದಾರೆ. ಹಿನ್ನೆಲೆಯಲ್ಲಿ ತಿಳಿ ಹಳದಿ ಬಣ್ಣವನ್ನು ಲೇಪನಮಾಡಿದ್ದಾರೆ. ಈ ಕಲಾಕೃತಿಯನ್ನು "ಇಂಪ್ರೆಷನಿಸಂ" ಶೈಲಿಯಲ್ಲಿ ರಚನೆ ಮಾಡಿದ್ದಾರೆ. ಈ

ಕಲಾಕೃತಿಯಲ್ಲಿ ನೀಲಿ, ಹಸಿರು, ಹಳದಿ, ಬಣ್ಣಗಳನ್ನು ಪ್ರಕಾರ ಭಿನ್ನಗಳಾಗಿ ಬಳಸಿಕೊಂಡಿದ್ದಾರೆ. ಈ ಕಲಾಕೃತಿಯು ನೋಡುವ ಸಹೃದಯನಿಗೆ ಕಣ್ಣಿಗೆ ತಂಪೆನಿಸುವ ರೀತಿಯಲ್ಲಿ ಚಿತ್ರಿತವಾಗಿದೆ.

**ಚಿತ್ರ ೮. ಪ್ರಕೃತಿಯ ದೃಶ್ಯ :** ರುಮಾಲೆ ಚನ್ನಬಸವಯ್ಯನವರು ಈ ಒಂದು ಕಲಾಕೃತಿಯನ್ನು ಜಲವರ್ಣ ಮಾಧ್ಯಮದಲ್ಲಿ ರಚನೆ ಮಾಡಿದ್ದಾರೆ. ಈ ಕಲಾಕೃತಿಯ ಮುಂಭಾಗದ ಬಲ ಬದಿಯಲ್ಲಿ ಒಂದು ದೊಡ್ಡದಾದ ಬಂಡೆಯನ್ನು ತೋರಿಸಿದ್ದಾರೆ. ಆ ಬಂಡೆಯ ಮೈವಳಿಕೆಯನ್ನು ವರ್ಣಗಳ ಮೂಲಕ ಅವರ ಕುಂಚದ ಸೆಳೆತಗಳಿಂದ ಬಹಳ ವಿಶಿಷ್ಟವಾಗಿ ತೋರಿಸಿದ್ದಾರೆ. ಆ ಬಂಡೆಯ ಪದರುಗಳನ್ನು ವಪೆಕ್ ಮಾಧ್ಯಮದಲ್ಲಿ ತುಂಬಾ ಅಂದವಾಗಿ ತೋರಿಸಿದ್ದಾರೆ. ಬಂಡೆಯ ಹಿಂಬದಿಯಲ್ಲಿ ಗಿಡಮರಗಳ ರಂಬೆಕೊಂಬೆಗಳನ್ನು ತುಂಬಾ ಅದ್ಭುತವಾಗಿ ತೋರಿಸಿದ್ದಾರೆ. ಎಲೆಗಳಿಗೆ ಹಸಿರು ನೀಲಿ ಮತ್ತು ಹಳದಿ ಬಣ್ಣಗಳಿಂದ ತುಂಬಾ ಸೂಕ್ಷ್ಮವಾಗಿ ತೋರಿಸಿದ್ದಾರೆ. ಈ ಕಲಾಕತಿಯನ್ನು ನೋಡಲು ತುಂಬಾ ಆನಂದವಾಗುವಂತೆ ಚಿತ್ರರಚನೆ ಮಾಡಿದ್ದಾರೆ.

**ತೈಲವರ್ಣ ಚಿತ್ರಗಳಲ್ಲಿಯ ವರ್ಣಗಾರಿಕೆ**

"ತೈಲವರ್ಣದ ಚಿತ್ರ ರಚನೆಯಲ್ಲೂ ಸಾಧನೆಗೈದ ರುಮಾಲೆಯವರು ಅನೇಕ ಭಾವಚಿತ್ರ, ನಿಸರ್ಗ ಚಿತ್ರಗಳನ್ನು ಚಿತ್ರಿಸಿದ್ದಾರೆ. ಆಗಿನ್ನು ವರ್ಣಛಾಯೆ ಚಿತ್ರ ಪ್ರಚಲಿವಿಲ್ಲದ ಕಾರಣವಾಗಿ ಭಾವ ಚಿತ್ರ. ಜೀವ ಮಾದರಿ ಚಿತ್ರಗಳನ್ನೇ ರಚಿಸಿದ್ದು ಹೆಚ್ಚು ಮಗನೀಯ ಸಂಗತಿ. ವರ್ಣಗಳ ಆಳವಾದ ಅಭ್ಯಾಸ ಅವು ನೀಡುವ ಪರಿಣಾಮವನ್ನು ಸಂದರ್ಭಕ್ಕೆ ತಕ್ಕಂತೆ ಬಳಸಿರುವ ತಂತ್ರವನ್ನು ಇಲ್ಲಿ ಕಾಣುತ್ತೇವೆ. ಕೆಲವೆಡೆ ಬಣ್ಣಗಳ ಪ್ರಕಾಶವನ್ನು ತಗ್ಗಿಸಬೇಕಾಗುತ್ತದೆ. ಇನ್ನೂ ಕೆಲವೆಡೆ ಹೆಚ್ಚಿಸಿ ತೋರಿಸುವ ಹಾಗೂ ಪ್ರಖರ ಹಾಗೂ ಸೌಮ್ಯ, ವರ್ಣಗಳ ಮೇಶದಿಂದ ಸೌಮ್ಯವಾತಾವರಣವನ್ನೇ ನಿರ್ಮಿಸುವ ಅವರ ಕೌಶಲ್ಯವನ್ನು ಈ ಚಿತ್ರಗಳಲ್ಲಿ ನೋಡಬಹುದಾಗಿದೆಯಲ್ಲದೆ ಈ ಬಣ್ಣಗಳು ಅಪಾರದರ್ಶಕ ಬಣ್ಣಗಳಾಗಿದ್ದು, ಕಡುಪಿನಿಂದ ಪ್ರಕಾಶಮಾನ ಬಣ್ಣಗಳನ್ನು ಬಳಸುವ ರೀತಿ ಇದಾಗಿದೆ".

ರುಮಾಲೆಯವರ ಭಾವ ಚಿತ್ರಗಳ, ಜೀವಮಾದರಿ ಚಿತ್ರಗಳ ರಚನೆಯಲ್ಲಿ ರೂಪದರ್ಶಿಯನ್ನು ಬಳಸಿ ಚಿತ್ರಿಸಿದ ಚಿತ್ರಗಳಲ್ಲಿ ಕುಂಚದ ಎಳೆತಗಳು ಬೇರೆಯೇ ಇದ್ದು, ಕಪ್ಪು, ಬಿಳುಪು ಛಾಯಚಿತ್ರ ನೋಡಿ ವರ್ಣಚಿತ್ರ ರಚಿಸಿದಲ್ಲಿ ಕುಂಚದ ಎಳೆತಗಳು ಬೇರೆಯೇ ಆಗಿದೆ. ಆದರೂ ಸಹಿತ ತಾದ್ರೂಪ್ಯತೆ (Likeness)ಯ ಅಂಶ ಮಾತ್ರ ಎರಡರಲ್ಲೂ ಒಂದೇ ಇರುವುದನ್ನು ನಾವು ಕಾಣುತ್ತೇವೆ. ಇಂತಹ ತಾದ್ರೂಪ್ಯತೆಯನ್ನು ತರುವಲ್ಲಿ ರುಮಾಲೆಯವರ ಕಲಾಕೌಶಲ್ಯ ಅವರ ಆ ಹಿಂದಿನ ಸಾಧನೆಯನ್ನು ಈ ಚಿತ್ರಗಳ ಮುಖಾಂತರ ನೋಡಬಹುದಾಗಿದೆ.

**ಚಿತ್ರ ೧. ಕಬ್ಬನ್ ಪಾರ್ಕ್‌ನ ಒಂದು ದೃಶ್ಯ :** ರುಮಾಲೆ ಅವರು ಈ ಒಂದು ಕಲಾಕೃತಿಯನ್ನು ತೈಲವರ್ಣ ಮಾಧ್ಯಮದಲ್ಲಿ ಕ್ಯಾನವಸಿನ ಮೇಲೆ ಚಿತ್ರಿಸಿದ್ದಾರೆ. ಈ ಕಲಾಕೃತಿಯಲ್ಲಿ ಮರದ

ರಂಬೆಕೊಂಬೆಗಳ ಮೈವಳಿಕೆಯನ್ನು ಪರಿಣಾಮಕಾರಿಯಾಗಿ ಚಿತ್ರಿಸುವುದು ಅಷ್ಟೇ ಕಷ್ಟದ ಕೆಲಸ ಇಲ್ಲಿ ಕಲಾವಿದನಿಗೆ ವರ್ಣಗಳ ಆಳವಾದ ಅನುಭವ ಬೇಕಾಗುತ್ತದೆ. ಮರಗಳಲ್ಲಿ ಬರುವ ಹೂವು ಎಲೆಗಳ ಮತ್ತು ಕೊಂಬೆಗಳ ಉಬ್ಬು ತಗ್ಗುಗಳಿಗೆ ಅನುಸಾರವಾಗಿ ಕುಂಚಗಳ ಎಳೆತಗಳಿವೆ. ನೆರಳು ಬೆಳಕಿನ ವರ್ಣಛಾಯೆಗೆ ಅನುಗುಣವಾಗಿ ನೀಲಿ ಮತ್ತು ಹಸಿರು ಬಣ್ಣಗಳಿಗೆ ಬಿಳಿ ಮತ್ತು ಕಪ್ಪುವರ್ಣ ಬೆರೆಸಿ ಮೂಲ ವರ್ಣಕ್ಕೆ ಪೂರಕವಾಗುವ ರೀತಿಯಲ್ಲಿ ಲೇಪಿಸಿ ಅವರ ಕೈಚಳಕವನ್ನು ತೋರಿಸಿದ್ದಾರೆ. ಕಲಾಕೃತಿಯ ಮುಂಭಾಗದ ಎಡಬದಿಯಲ್ಲಿ ಒಂದು ದೊಡ್ಡ ಮರವನ್ನು ಚಿತ್ರಿಸಿದ್ದಾರೆ. ಆ ಮರದ ಹಿಂಬದಿಯಲ್ಲೇ ಸಾಲುಮರಗಳನ್ನು ಯಥಾರ್ಥನೆಗೆ ಪೂರಕವಾಗಿ ತೋರಿಸಿದ್ದಾರೆ. ಮತ್ತು ಕಲಾಕೃತಿಯ ಮುಂಭಾಗದ ಮಧ್ಯಭಾಗದಲ್ಲಿ ಅಲ್ಲಿಯೂ ಕೂಡ ಒಂದು ದೊಡ್ಡಮರವೊಂದನ್ನು ತೋರಿಸಿದ್ದಾರೆ. ಅದರ ಹಿಂಬದಿ ಯಲ್ಲಿಯೂ ಕೂಡ ಸಾಲುಮರಗಳನ್ನು ತೋರಿಸಿದ್ದಾರೆ. ಮರಗಳ ಎಲೆ ಹೂವುಗಳ ಮೇಲೆ ನೆರಳು ಬೆಳಕನ್ನು ತುಂಬಾ ಸ್ಪಷ್ಟವಾಗಿ ತೋರಿಸಿದದಾರೆ. ಕೆಳಭಾಗದ ನೆಲದ ಮೇಲೆ ಆ ಸಾಲುಮರಗಳಿಂದ ಬದಂತಹ ನೆರಳು ಬೆಳಕನ್ನು ತುಂಬಾ ಅದ್ಭುತವಾಗಿ ಅವರ ಕುಂಚಗಳ ಸೆಳತಗಳಿಂದ ಕಲಾಕೃತಿಗೆ ಮೆರಗನ್ನು ಕೊಟ್ಟಿದ್ದಾರೆ. ಈ ಒಂದು ಕಲಾಕೃತಿಯು ನೋಡುಗನಿಗೆ ಅದ್ಭುತವಾಗಿ ಕಾಣಿಸುತ್ತದೆ.

**ಚಿತ್ರ ೨. ಶ್ರೀ ಮಂಚೀದೇವರು :** ಕಲಾವಿದ ರುಮಾಲೆ ಚನ್ನಬಸವಯ್ಯನವರು ಕ್ಯಾನವಸಿನ ಮೇಲೆ ತೈಲವರ್ಣ ಮಾಧ್ಯಮದಲ್ಲಿ ಶ್ರೀಮಂಚೀದೇವರ ಚಿತ್ರಣವನ್ನು ಚಿತ್ರಿಸಿದ್ದಾರೆ. ಈ ಕಲಾಕೃತಿಯು ಕಲ್ಲಿನ ಶಿಲ್ಪವಾಗಿದೆ. ಈ ಕೃತಿಯು ಉಬ್ಬುಗೆತ್ತನೆಯ ರೀತಿಯಲ್ಲಿ ವರ್ಣಗಳ ಮೂಲಕ ಕುಂಚದ ಕೈ ಚಳಕವನ್ನು ಉಪಯೋಗಿಸಿ ನೆರಳು ಬೆಳಕಿನ ವಿನ್ಯಾಸದೊಂದಿಗೆ ರಚನೆ ಮಾಡಿದ್ದಾರೆ. ಆ ಮಂಚೀದೇವರ ತಲೆಯ ಮೇಲೆ ಕಿರೀಟವಿದೆ. ನಾಲ್ಕು ಕೈಗಳಿವೆ. ಬಲಗೈಯಲ್ಲಿ ತ್ರಿಶೂಲವನ್ನು ಹಿಡಿದುಕೊಂಡಿದ್ದಾನೆ. ಮತ್ತೊಂದು ಕೈಯಲ್ಲಿ ಕತ್ತಿಯನ್ನು ಹಿಡಿದಿರುವಂತೆ ಕಾಣುತ್ತದೆ. ಎಡಗೈಯಲ್ಲಿ ಒಂದು ಅಸ್ತ್ರವನ್ನು ಹಿಡಿದಂತೆ ತೋರುತ್ತದೆ. ಅದು ಅಸ್ಪಷ್ಟತೆಯಿಂದ ಕೂಡಿದೆ. ಮತ್ತೊಂದು ಕೈಯನ್ನು ಕೆಳಮುಖವಾಗಿ ತೋರಿಸಿದ್ದಾರೆ. ಎರಡು ಕಾಲಗಳನ್ನು ಪಾರ್ಶ್ವಶೈಲಿಯಲ್ಲಿದೆ. ಹಿನ್ನೆಲೆಯಲ್ಲಿ ದೇವಾಲಯದ ಗೋಡೆಯನ್ನು ಹಳದಿ ವರ್ಣದೊಂದಿಗೆ ಬಿಳಿವರ್ಣವನ್ನು ಬೆರೆಸಿ ಗೋಡೆಗೆ ಲೇಪಿಸಿದ್ದಾರೆ. ಆ ಗೋಡೆಯ ಮೈವಳಿಕೆಯು ತುಂಬಾ ಆಕರ್ಷಕವಾಗಿದೆ. ಒಟ್ಟಿನಲ್ಲಿ ಈ ಕಲಾಕೃತಿಯನ್ನು ನೋಡುವ ಸಹೃದಯರಿಗೆ ಭಕ್ತಿಭಾವವನ್ನು ಮೂಡಿಸುವಂತಹ ಚಿತ್ರಣವಾಗಿದೆ. ಈ ಕಲಾಕೃತಿಯು ರುಮಾಲೆ ಅವರ ಗ್ಯಾಲರಿಯಲ್ಲಿ ಸಂಗ್ರಹವಾಗಿದೆ.

**ಚಿತ್ರ ೩. ಹೈಕೋರ್ಟ್ ಹತ್ತಿರದ ಹಳದಿ ಹೂವಿನ ಮರ :** ಕಲಾವಿದ ರುಮಾಲೆ ಚನ್ನಬಸವಯ್ಯ ನವರು ಈ ಕಲಾಚಿತ್ರಣವನ್ನು ತೈಲಮಾಧ್ಯಮದಲ್ಲಿ ರಚನೆ ಮಾಡಿದ್ದಾರೆ. ಈ ಚಿತ್ರಣದಲ್ಲಿ ಹಳದಿ ಹೂವಿನ ಮರವನ್ನು ಮುಖ್ಯ ಕೃತಿಯಾಗಿ ತೆಗೆದುಕೊಂಡಿದ್ದಾರೆ. ಈ ಮರದಲ್ಲಿ ಎಲ್ಲಿಯೋ ಹಸಿರು ಎಲೆಗಳು ಕಾಣುತ್ತಿಲ್ಲ. ಬರಿ ಹೂವುಗಳನ್ನು ತುಂಬಿಕೊಂಡು ಮದುವಣಗಿತ್ತಿಯಂತೆ ತೋರುತ್ತದೆ.

ಅದರ ಎಡಬದಿಯಲ್ಲಿ ಎರಡು ಉದ್ದನೆಯ ಮರಗಳನ್ನು ತೋರಿಸಿದ್ದಾರೆ ಮತ್ತು ಬಲಬದಿಯ ಕೊನೆಯಲ್ಲಿ ಹಸಿರು ಬಣ್ಣದ ಮರಗಳನ್ನು ತೋರಿಸಿದ್ದಾರೆ. ಇವುಗಳ ಹಿಂಭಾಗದಲ್ಲಿ ಹೈಕೋರ್ಟ್ ಒಂದು ಬದಿಯನ್ನು ತೋರಿಸಿದ್ದಾರೆ. ಹಿನ್ನೆಲೆಯಲ್ಲಿ ವಿಶಿಷ್ಟವಾದ ಮೈವಳಿಕೆಯಲ್ಲಿ ಕಾಶ ನೀಲಿಯನ್ನು ತೋರಿಸಿದ್ದಾರೆ.

**ಚಿತ್ರ ೪. ಪ್ರಕೃತಿಯ ಚಿತ್ರ :** ಈ ನಿಸರ್ಗ ಚಿತ್ರಣವನ್ನು ರುಮಾಲೆ ಚನನ್ನಸವಯ್ಯನವರು ತೈಲಮಾಧ್ಯಮದಲ್ಲಿ ೧೯೮೬ರಲ್ಲಿ ರಚಿಸಿದ ಚಿತ್ರಣವಾಗಿದೆ. ರಸ್ತೆಯ ಬದಿಯಲ್ಲಿ, ಹಳದಿ ಹೂವಿನ ಮರವನ್ನು ನೈಜವಾಗಿ ಚಿತ್ರಿಸಿದ್ದಾರೆ. ಗಾಢವಾದ ನೆರಳು ಬೆಳಕನ್ನು ತೋರಿಸಿ ಕೃತಿಗೆ ಹೆಚ್ಚು ಮೆರಗು ನೀಡಿದ್ದಾರೆ. ಅದರ ಬಲಭಾಗದಲ್ಲಿ ಒಣಗಿದ ಮರದ ಕೊಂಬೆಗಳು ಕಾಣಿಸುತ್ತವೆ. ಇವುಗಳ ಹಿಂಬದಿ ಯಲ್ಲಿ ಒಂದು ಮನೆಯ ಕಟ್ಟಡವಿದೆ. ಅದರ ಎಡಬದಿಯಲ್ಲಿ ಕೆಂಪು ಹೂವಿನ ಮರಗಳ ಸಾಲನ್ನು ಚಿತ್ರಿಸಿದ್ದಾರೆ. ಹಿನ್ನೆಲೆಯಲ್ಲಿ ಹಳದಿ ಮತ್ತು ನೀಲಿ ಬಣ್ಣಗಳಿಂದ ಮೊಡದ ಮೈವಳಿಕೆಯನ್ನು ತೋರಿಸಿದ್ದಾರೆ.

**ಚಿತ್ರ ೫. ಗೊಲ್ಮೊಹರ್ ಸಾಲು ಮರಗಳು :** ಚಿತ್ರಕಲಾವಿದ ರುಮಾಲೆ ಚನ್ನಬಸವಯ್ಯನವರು ೧೯೮೭ರಲ್ಲಿ ತೈಲವರ್ಣದಲ್ಲಿ ರಚಿಸಿದ ಚಿತ್ರಣವಿದು. ಈ ಕೃತಿಯ ಮುಂಭಾಗದಲ್ಲಿ ಎರಡು ಕುಳಿತು ಕೊಳ್ಳುವ ಕಟ್ಟಗಳಿವೆ. ಅವುಗಳ ಪಕ್ಕದಲ್ಲಿಯೇ ಗೊಲ್ಮೊಹರ್ ಮರವನ್ನು ದೊಡ್ಡದಾಗಿ ತೋರಿಸಿದ್ದಾರೆ. ಆ ಮರದ ತುಂಬಾ ಕೆಂಪು ಮತ್ತು ಕೇಸರಿ ಬಣ್ಣಗಳ ಹೂವನ್ನು ನೆರಳು ಬೆಳಕಿನ ವಿನ್ಯಾಸದೊಂದಿಗೆ ತೋರಿಸಿದ್ದಾರೆ. ಈ ಮರದ ಅಕ್ಕಪಕ್ಕದಲ್ಲಿ ಸಾಲುಮರಗಳನ್ನು ತೋರಿಸಿದ್ದಾರೆ. ಹಸಿರು ಹಾಗೂ ನೀಲಿ ಬಣ್ಣಗಳನ್ನು ಪ್ರಮುಖವಾಗಿ ಬಳಸಿಕೊಂಡಿದ್ದಾರೆ. ಹಿನ್ನೆಲೆಯಲ್ಲಿ ಆಕಾಶಕ್ಕೆ ನೀಲಿಬಣ್ಣವನ್ನು ಬಳಸಿಕೊಂಡಿದ್ದಾರೆ.

**ಪ್ರಭಾವ**

ಕಲಾ ಪ್ರಪಂಚದಲ್ಲಿ ಅನೇಕ ಕಲಾವಿದರು ತಮ್ಮದೇ ಆದ ಶೈಲಿ ವೈಶಿಷ್ಟತೆಯಿಂದ ತಮ್ಮ ಸಮಕಾಲೀನ ಕಲಾವಿದರಿಂದ ಬೇರೆಯೇ ಎನ್ನುವಂತೆ ತಮ್ಮ ಕಲಾಕೃತಿಗಳ ಮೂಲಕ ತಮ್ಮತನವನ್ನು ಅಭಿವ್ಯಕ್ತಪಡಿಸಿದ್ದಾರೆ. ಈ ಪ್ರಪಂಚದ ಎಲ್ಲಾ ಚಿತ್ರಕಲಾವಿದರು ಒಂದಲ್ಲಾ ಒಂದು ರೀತಿಯಲ್ಲಿ ಒಬ್ಬರು ಇನ್ನೊಬ್ಬರ ಮೇಲೆ ಪ್ರಾರಂಭದ ಹಂತದಲ್ಲಿ ಪ್ರಭಾವ ಬೀರಿರುವುದನ್ನು ಕಾಣುತ್ತೇವೆ. ಕೊನೆಗೆ ತಮ್ಮದೆ ಆದ ಮಾರ್ಗದಲ್ಲಿ ಚಿತ್ರಗಳನ್ನು ಚಿತ್ರಿಸಿ ತಮ್ಮ ಪ್ರತಿಭೆಯನ್ನು ಮೆರೆದು ತಮಗೆ ತಾವೇ ಸಾಟಿಯಾಗಿರುವುದನ್ನು ನೋಡುತ್ತೇವೆ.

ಚಿತ್ರ ಕಲಾವಿದ, ಸ್ವತಂತ್ರ್ಯ ಹೋರಾಟಗಾರ, ಸೇವದಳದ ಸಂಸ್ಥಾಪಕರಾದ ರುಮಾಲೆ ಚನ್ನಬಸವಯ್ಯ ನವರು ಇದರಿಂದ ಹೊರತಾಗಿಲ್ಲ ಅವರು ಚಿತ್ರಕಲಾ ಅಭ್ಯಾಸ ಮಾಡುವ ಸಂದರ್ಭದಲ್ಲಿ ಅವರ

ಗುರುಗಳ ಅಕಾಡೆಮಿಕ್ ಕಲಾವಾತಾರಣದ ಪ್ರಭಾವ ಒಂದೆಡೆಯಾದರೆ ಪಾಶ್ಚಾತ್ಯ ದೇಶದ ಹೆಸರಾಂತ ಕಲಾವಿದವ್ಯಾನ್‌ಗಾಗೂ ಅವರ ಕಲಾಕೃತಿಗಳು ಇವರ ಮೇಲೆ ಪ್ರಭಾವ, ಬೀರಿರಬಹುದು ರುಮಾಲೆ ಅವರು ನಿಸರ್ಗ ಚಿತ್ರಗಳಲ್ಲಿ ಬೆಂಗಳೂರು, ಕೂಡ ಸಂಗಮ, ಶ್ರೀಲಂಕ, ಮೈಸೂರು ಪರಿಸರ ಹೀಗೆ ನಮ್ಮ ರಾಜ್ಯ ಹಾಗೂ ಹೊರ ರಾಜ್ಯಗಳ ಸುತ್ತಮುತ್ತಲಿನ ಪರಿಸರ ರುಮಾಲೆ ಅವರ ಮೇಲೆ ಗಾಢವಾದ ಪ್ರಭಾವ ಬೀರಿದ್ದರಿಂದ ಪ್ರಕೃತಿ ಚಿತ್ರಗಳಲ್ಲಿ ಗಿಡಮರಗಳು ಬೆಟ್ಟಗುಡ್ಡಗಳು, ಮೊಡಗಳ ಮೈವಳಿಕೆ ಅವರ ಬಣ್ಣಗಳ ಸೆಳತೆಗಳನ್ನು ನೋಡಬಹುದಾಗಿದೆ. ಅಷ್ಟೇ ಅಲ್ಲದೇ ಭಾವಚಿತ್ರಣಗಳಲ್ಲಿಯೂ ರುಮಾಲೆ ಅವರು ಪರಿಸರಕ್ಕೆ ಹೆಚ್ಚಿಸಿ ಆದ್ಯತೆಯನ್ನು ನೀಡಿದ್ದಾರೆ.

ರುಮಾಲೆ ಅವರು ಮೈಸೂರು ಜಯ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಯ ಕಲಾ ಶಾಲೆಯಲ್ಲಿ ಅಭ್ಯಾಸಿಸುವಾಗ ಪಾಶ್ಚಿಮಾತ್ಯ ಪದ್ಧತಿಯ ಅಕಾಡೆಮಿಕ್ ಶೈಲಿಯ ತಂತ್ರವನ್ನು ಹೇಳಿಕೊಡುತ್ತಿದ್ದರು. ಇದರಿಂದಾಗಿ ಆಲದ ಮರದಂತೆ ಹೆಬ್ಬಿನಿಂತ ಈ ಕಲಾ ಶಾಲೆಯ ಅಭ್ಯಾಸ ಕ್ರಮದ ನೆರಳನ್ನು ಆಗಿನ ಕಾಲದ ಎಲ್ಲಾ ಕಲಾವಿದರ ಕಲಾಕೃತಿಗಳಲ್ಲೂ ಕಾಣುತ್ತೇವೆ. ಹೀಗಾಗಿ ಭಾರತೀಯ ಹಾಗೂ ಪಾಶ್ಚಿಮಾತ್ಯ ಮಿಶ್ರ ಕಲಾ ಸಾಂಪ್ರದಾಯದ ಚಿತ್ರಕಲಾದರು ಬೆಳೆದು ಬಂದಿದೆ. ಅವರಲ್ಲಿ ಚಿತ್ರಕಲಾವಿದ ರುಮಾಲೆ ಯವರು ಒಬ್ಬರು. ರುಮಾಲೆ ಅವರ ಕಲಾಕೃತಿಗಳಲ್ಲಿ ಪ್ರಕೃತಿ ಚಿತ್ರಗಳಲ್ಲಿ ಮತ್ತು ಭಾವಚಿತ್ರಗಳ ಭಾವನೆಗಳು ಭಾರತೀಯವಾದರೂ ಚಿತ್ರಿಸುವಂತ ಶೈಲಿ, ತಂತ್ರ ಪಾಶ್ಚಿಮಾತ್ಯ ಅಕಾಡೆಮೆಕ್ ಶೈಲಿಯ ಒಂದು ರೀತಿಯ ಅಭ್ಯಾಸ ಪೂರ್ಣವಾದ ಕಲಾಕೃತಿಗಳಾಗಿವೆ. ವರ್ಣಗಳನ್ನು ಬೆರೆಸುವ ರೀತಿ. ಆಕೃತಿಗಳ ನೆರಳು ಬೆಳಕನ್ನು ತಿರ್ಮಾನದ ಅನುಭವ, ಮೈವಳಿಕೆ, ತದ್ರೂಪತೆ, ಪ್ರತಿಯೊಂದು ವಸ್ತುವಿನ ವಿವರ, ಆಕೃತಿಗಳನ್ನು ಪ್ರಮಮ ಬದ್ಧವಾಗಿ ರಚಿಸಿದ ರೀತಿ. ಆಕೃತಿಗಳ ನಿಯೋಜನೆ ಮುಖದ ಭಾವನೆ, ಎಲ್ಲದರಲ್ಲೂ ಬೆಂಗಳೂರು ಕಲಾಮಂದಿರ ಮತ್ತು ಚಾಮರಾಜೇಂದ್ರ ಕಲಾಶಾಲೆಯ ಪ್ರಭಾವವನ್ನು ಕಾಣುತ್ತೇವೆ.

**ಪ್ರೇರಣೆ**

ಕಲಾಕಾರನಿಗೆ ಅನೇಕ ಪ್ರೇರಣೆ ದೊರಕುವುದುಂಟು. ಕೆಲವೊಮ್ಮೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಆದರೆ, ಕಲಾಕಾರನ ಮನಸ್ಸು ಬುದ್ಧಿಶಕ್ತಿ ಸರ್ವದಾ ಜಾಗೃತವಾಗಿದ್ದು, ಸಂವೇದನಾಶೀಲವಾಗಿರಬೇಕು. ಸಮಾಜದ ಕೋಟಲೆ, ಸಂಘರ್ಷ, ನಿರಾಶೆ ಹಾಗೂ ಉಲ್ಲಾಸ ದ್ವಂದ್ವ ಇವೆಲ್ಲವೂ ಕಲಾವಿದನ ಸಂವೇದನಾಶೀಲ ಮನಸ್ಸನ್ನು ಉತ್ತೇಜಿಸಲು ಸಮರ್ಥವಾಗುತ್ತವೆ.

ಪ್ರತಿಯೊಬ್ಬ ಮಾನವನ ಜೀವನ ಮುಖ್ಯವಾಗಿ ತನು, ಮನ, ಆತ್ಮಗಳೆಂಬ ಮೂರು ಅಂಶಗಳನ್ನು ಹೊಂದಿದೆ. ಶಿಕ್ಷಣವು ಇವುಗಳನ್ನು ಸಂಸ್ಕರಿಸುವ ಕಾರ್ಯವನ್ನು ಸದಾಕಾಲವು ಮಾಡುತ್ತಿರುತ್ತದೆ. ತನುವಿನ ಬೇಕಾದ ಅವನ ವಸತಿ ಸಂಸ್ಕಾರಕ್ಕೆ ಬೇಕಾದ ಉಪಜೀವನದ ಮಾರ್ಗವನ್ನು ಮನಸ್ಸಿನ ವಿಕಾಸಕ್ಕಾಗಿ

ಸಾಹಿತ್ಯ, ಕಲೆ, ನೈತಿಕ ಮೌಲ್ಯಗಳನ್ನು ಆತ್ಮದ ಉದ್ಧಾರಕ್ಕಾಗಿ ಧರ್ಮ ಆಧ್ಯಾತ್ಮದ ಪರಮಾರ್ಥಿಕ ಮೌಲ್ಯಗಳನ್ನು ಕೊಡಬಲ್ಲದೆ ನಿಜವಾದ ಶಿಕ್ಷಣ ಈ ರೀತಿಯ ವಿದ್ಯೆಪ್ರಸಾರದಿಂದ ಕಲೆ-ಶಿರ-ಸಂವರ್ಧನೆ ಯಾಗುವುದು ಕರವು ಕಾರ್ಯವನ್ನು ಉರವು ಹೃದಯವನ್ನು, ಶಿರವು ಅರಿವನ್ನು ಸೂಚಿಸುತ್ತದೆ. ಶಿಕ್ಷಣವು ದೇಹಕ್ಕೆ ಪುಷ್ಟಿಯನ್ನು, ಮನಕ್ಕೆ ವೈಶಾಲ್ಯತೆಯನ್ನು, ಆತ್ಮಕ್ಕೆ ಆನಂದವನ್ನು ಕೊಟ್ಟು ಅಂತಃ ಕಾರಣವನ್ನು ಅರಳಿಸಿ ಸದ್ಗುಣಗಳನ್ನು ಮೈಗೂಡಿಸಿಕೊಂಡು ಬರಲು ಪ್ರೇರಣೆಯನ್ನು ನೀಡುತ್ತದೆ. ಹೀಗಾಗಿ ಶಿಕ್ಷಣವು ಇಂದು ಮಾನವನ ಬದುಕಿಗೆ ಪ್ರಮುಖ ಆಧಾರವಾಗಿ ನಿಂತಿದೆ.

ರುಮಾಲೆಯವರು ಬಾಲ್ಯದಿಂದಲೇ ಚಿತ್ರಕಲೆ ಅಭಿರುಚಿಯನ್ನು ಹೊಂದಿದವರು. ಇವರು ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣವನ್ನು ಎರಡನೇ ವರ್ಷಕ್ಕೆ ನಿಲ್ಲಿಸಿ ಸ್ವಾತಂತ್ರ್ಯ ಚಳುವಳಿ, ಸೇವಾದಳದಲ್ಲಿ ಹಲವಾರು ವರ್ಷಗಳ ಕಾಲ ಕೆಲಸ ಮಾಡಿದಂತವರು. ಅದಾದ ನಂತರ ನೇರವಾಗಿ ಚಿತ್ರಕಲೆಯನ್ನು ಆಯ್ದುಕೊಂಡು ನಿಸರ್ಗದೊಂದಿಗೆ ಬಣ್ಣಕುಂಚದಿಂದ ಬೆರೆತವರು."

ರುಮಾಲೆಯವರ ಮನೆತನ ಒಳ್ಳೆಯ ಧಾರ್ಮಿಕ ಮನೆತನದಿಂದ ಬಂದಿದ್ದು, ರುಮಾಲೆಯವರ ತಂದೆ ಕರಿಬಸಪ್ಪನವರು ಒಬ್ಬ ದೊಡ್ಡ ಜಮೀನ್ದಾರರು ಆಗಿದ್ದರು. ಅವರ ಜೊತೆಯಲ್ಲಿ ಹೊಲ-ಗದ್ದೆಗಳಿಗೆ ಹೋಗಿ ಬರುವಾಗ ಪರಿಸರದ ಮೇಲೆ ಇವರಿಗೆ ಮನಸ್ಸೆಳೆದಿರಬೇಕು. ಹೊಲಕ್ಕೆ ಹೋಗುವಾಗ, ಬರುವಾಗ ಪರಿಸರವನ್ನು ತುಂಬಾ ವೀಕ್ಷಣೆ ಮಾಡಿ ಅದಕ್ಕೆ ಅವರು ಶರಣರಾಗಿದ್ದಾರೆ.

ತಾಯಿ ಶ್ರೀಮತಿ ಗೌರಮ್ಮ ಧಾರ್ಮಿಕ ಮನೋವೃತ್ತಿಯವರು ಪ್ರತಿಯೊಂದು ಹಬ್ಬದ ಕಲೆ ಸನ್ನಿವೇಶಗಳನ್ನು ತಂದುಕೊಂಡು ಕಲಾರಾಧನೆ ಮಾಡುವುದನ್ನು ಹಾಗೂ ಅವರ ತಾಯಿ ಎಂಬ್ರೈಡರ್ ಕೆಲಸ ಮಾಡುವುದನ್ನು ನೋಡುವ ಭಾವ ಬಾಲಕನಾಗಿದ್ದಾಗ ರುಮಾಲೆಯವರ ಮನದಲ್ಲಿ ಚಿತ್ರರೂಪವಾಗಿ ಮೂಡಿರಬಹುದು.

ಕಲೆ ಮೂಲತಃ ಮಾನವನ ಸೃಷ್ಟಿ. ಅದು ಪ್ರತಿಭಾವಂತ ಮಾನವನ ಜೀವನಾನುಭವದ ಅಭಿವ್ಯಕ್ತಿ ಕಲೆ ಮಾನವತೆಯ ವಿಶಿಷ್ಟ ಆನಂದಾಯಿನಿಯಾದ ಮಾತರ ಶಕ್ತಿ, ಭೌದ್ಧಿಕ ಜಗತ್ತಿನ ಬಾಹ್ಯಸೃಷ್ಟಿಗಿಂತ ಹೆಚ್ಚಾಗಿ ಮಾನವನ ಆಂತರಿಕ ನಿತ್ಯ ಸತ್ಯದ ಆನಂದ ಅನುಭವದ ಅಭಿವ್ಯಕ್ತಿ ಕಲಾವಿದನ ಈ ಕಲೆ ಭಾವ, ಬಣ್ಣ, ರೇಖೆ ಮುಂತಾದ ವಿವಿಧ ಮಾಧ್ಯಮದಲ್ಲಿ ಹೊಮ್ಮಿ ಸಮಾಜದ ಹೃದಯವಂತಿಕೆಯನ್ನು ಆಗುವಂತೆ ಮಾಡುತ್ತದೆ.

"ಯಾವುದೇ ಒಂದು ನಾಡಿನ ಜನಾಂಗದ ಬದುಕಿನ ಬೆಳವಣಿಗೆಯನ್ನು ಅವರ ಕಲಾ ಪರಂಪರೆ ಹಾಗೂ ಸಂಪ್ರದಾಯಗಳನ್ನು ತಿಳಿಯಬೇಕಾದರೆ ಅವರ ಪರಿಸರದಲ್ಲಿ ಜೀವ ಪಡೆದಿರುವ ಕತೆಗಳನ್ನು ಅಧ್ಯಯನ ಮಾಡಬೇಕಾಗುತ್ತದೆ. ಮಾನವನ ಸಾಂಸ್ಕೃತಿಕ ಲೋಕದ ಪ್ರತಿ ಹಂತದಲ್ಲೂ ಕಲೆಪ್ರೇರಣೆಯ

ವಸ್ತುವಾಗಿರುತ್ತದೆ. ಕಲಾವಿದರಿಗೆ ಪ್ರಕೃತಿಯ ಪ್ರೇರಣೆಯನ್ನು ನೀಡುತ್ತದೆ. ಅಲ್ಲದೆ ಒಂದೊಂದು ಸವಾಲನ್ನು ಎದುರಿಸುವ ಸಂದರ್ಭವನ್ನು ಸೃಷ್ಟಿಸುತ್ತದೆ."

**ರಚನಾ ಶೈಲಿ**

ರುಮಾಲೆಯವರು ತಮ್ಮದೇಯಾದ ತಂತ್ರಶೈಲಿಗಳಿಂದ ಕೇವಲ ಭಾರತದಲ್ಲಿ ಅಲ್ಲದೆ ದೇಶವಿದೇಶಗಳಲ್ಲಿ ಅನೇಕ ಜನರ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಇವರಿಗೆ ರಾಜ್ಯ ಮತ್ತು ಹೊರ ರಾಜ್ಯ-ರಾಷ್ಟ್ರಗಳಲ್ಲಿ ಪ್ರಶಸ್ತಿ ಪತ್ರ ನೀಡಿ ಗೌರವಿಸಿದ್ದಾರೆ.

**ಕಲಾಬದುಕಿನ ಹಂತದಲ್ಲಿನ ಪ್ರಭಾವ ಪ್ರೇರಣೆಗಳು**

ಸೃಜನಾತ್ಮಕ ಸಂಶೋಧನಾತ್ಮಕ ಮತ್ತು ಕ್ರಿಯಾಶೀಲವಾದ ಗುಣಗಳನ್ನು ಹೊಂದಿದ ರುಮಾಲೆಯವರು ತಮ್ಮ ಕಲಾಬದುಕು ಆರಂಭಗೊಳಿಸಿದ ಜಲವರ್ಣ, ತೈಲವರ್ಣ ಚಿತ್ರಗಳ ರಚನೆಯಿಂದ ಹಾಗೂ ಪಾಶ್ಚಾತ್ಯರ ಕಲಾಕೃತಿಗಳನ್ನು ನೋಡುವುದರ ಮೂಲಕ ಚಿತ್ರರಚನೆ ಪ್ರಾರಂಭಿಸಿದೆ. ನಂತರ ಉತ್ಕೃಷ್ಟವಾದ ನೈಜಶೈಲಿಯ ಭಾವಚಿತ್ರ, ನಿಸರ್ಗಚಿತ್ರ ರಚನೆ ಹೀಗೆ ಹತ್ತುಹಲವು ಅಂಶಗಳನ್ನು ಆವಿಷ್ಕರಿಸಿದ ರುಮಾಲೆಯವರು ಯಾವಾಗಲೂ ಕ್ರಿಯಾತ್ಮಕ ಗುಣ ಹೊಂದಿದ್ದರು. ಇವರು ಚಿತ್ರಕಲಾ ಕ್ಷೇತ್ರಕ್ಕೆ ಅಮೂಲ್ಯವಾದ ಕೊಡುಗೆಯನ್ನು ನೀಡಿದ್ದಾರೆ.

"ಪ್ರೇರಣೆಯು ಸಹಾಯ ಎನ್ನುವ ಪದಕ್ಕೆ ಸಮೀಪದಲ್ಲಿದೆ. ಸಹಾಯ ಪ್ರೇರಣೆ ಈ ಎರಡು ಪದಗಳು ಬೇರೆ-ಬೇರೆಯಾದರೂ ಅದರ ಅರ್ಥ ಕೆಲವು ಸಂದರ್ಭಗಳಲ್ಲಿ ಒಂದೇ ಆಗಿರುತ್ತದೆ. ಸಹಾಯವು ಬಾಹ್ಯಪ್ರಚೋದನೆಗೆ ಸಂಬಂಧಪಟ್ಟರೆ ಪ್ರೇರಣೆಯು ಆಂತರಿಕ ಪ್ರಚೋದನೆಗೆ ಸಂಬಂಧಪಟ್ಟಿರುತ್ತದೆ."

ಹೀಗೆ ರುಮಾಲೆಯವರಿಗೆ ತಂದೆ-ತಾಯಿಯಿಂದ, ಕಲಾ ಗುರುಗಳಿಂದ ತಮಗೆ ಸಾಕಷ್ಟು ಪ್ರೇರಣೆ ನೀಡಿದ ಕಲಾ ಸ್ನೇಹಿತರಿಂದ ಹಾಗೂ ಕಲಾ ಅಧ್ಯಯನ ಪ್ರವಾಸದ ಪರಿಣಾಮವಾಗಿ ಕರ್ನಾಟಕದಲ್ಲೇ ಕಲಾವಿದರಲ್ಲಿ ಇವರೂ ಒಬ್ಬರೆಂದು ಗುರುತಿಸಿಕೊಂಡಿದ್ದಾರೆ.

**ತಂತ್ರಗಾರಿಕೆ**

ಕಲೆಯು ಯಾವಾಗಲೂ ಜನಗಳ ಮನಸ್ಸಿನ ಮೇಲೆ ಪ್ರಭಾವ ಬೀರುವ ಒಂದು ಮುಖ್ಯ ಸಾಧನೆಯಾಗಿದೆ. ಅದಕ್ಕಾಗಿ ಚಿತ್ರಕಲೆ ಮನೋವಿಜ್ಞಾನದ ಸಿದ್ಧಾಂತಗಳ ಮೇಲೆ ಆದಾರವಾಗಿರುವುದು ಕಲೆಯಲ್ಲಿ ಕೇವಲ ತಾಂತ್ರಿಕ, ನೈಪುಣ್ಯತೆಯೊಂದಿದ್ದರೆ ಸಾಲದು ತಾಂತ್ರಿಕ ನೈಪುಣ್ಯದ ಜೊತೆಗೆ ಮನೋವಿಜ್ಞಾನದ ತತ್ವಗಳನ್ನು ಅಳವಡಿಸಿಕೊಂಡರೆ ಚಿತ್ರಕಲಾಕೃತಿಯ ನೈಪುಣ್ಯತೆ ಇನ್ನೂ ಹೆಚ್ಚುತ್ತದೆ. ಯಾವುದೇ ಒಂದು ಕಲಾಕೃತಿಯ ಹಿಂದೆ ಕಲಾವಿದನ ಮನಸ್ಥಿತಿಯೂ ಮುಖ್ಯವಾಗಿ ಕಾರಣವಾಗಿರುತ್ತದೆ. ಹೀಗಾಗಿ ಚಿತ್ರಕಲೆ ಮನಃಶಾಸ್ತ್ರಕ್ಕೆ ಬಿಡಲಾರದ ನಂಟುತನವಿದ್ದು, ಇವು ಒಂದೊಂದಕ್ಕೊಂದು ಪೂರಕ ಮತ್ತು ಪ್ರೇರಕವಾದ ಸಂಬಂಧವನ್ನು ಹೊಂದಿವೆ ಎಂದು ಹೇಳಬಹುದು."

ರುಮಾಲೆಯವರು ಕಲಾಕೃತಿಗಳನ್ನು ರಚಿಸುವಾಗ ಅವರು ಬಳಸಿದ ತಂತ್ರವಿಧಾನವನ್ನು ನಾಇವು ಗಮನಿಸಿದಾಗ ಅಧ್ಯಯನ ಕಾಲದ ಹಂತದಲ್ಲಿಯ ಕಲಾಕೃತಿಗಳಲ್ಲಿ ಬಳಸಿದ ತಂತ್ರಗಾರಿಕೆ, ವರ್ಣಪ್ರಭಾವ ಮತ್ತು ಕಲಾವಿದನಾಗಿ ನಿರ್ಮಾಣಗೊಂಡಿರುವ ಕಲಾಕೃತಿಗಳನ್ನು ಗಮನಿಸಿದಾಗ ಇಲ್ಲಿಯ ಆಯಾ ಒಂದು ಅವಧಿಗೆ ಸಂಬಂಧಪಟ್ಟಂತೆ ತಂತ್ರವಿಧಾನವನ್ನು ಬಳಸಿಕೊಂಡು ರುಮಾಲೆಯವರು ಕಲಾಕೃತಿಯನ್ನು ರಚಿಸಿದ್ದು ಕಂಡುಬರುತ್ತದೆ.

ರುಮಾಲೆಯವರ ಕಲಾಕೃತಿಗಳನ್ನು ನೋಡಿದೊಡನೆಯೇ ಅದರಲ್ಲಿ ಏನೋ ಒಂದು ರೀತಿಯ ಮನಸ್ಸನ್ನು ಸೆಳೆಯುವ ಆಕರ್ಷಣೆಯು ತನ್ನನ್ನು ತಾನೇ ಕರೆದೊಯ್ಯುತ್ತದೆ. ಇವರೇ ಹೇಳುವ ಹಾಗೆ ವ್ಯಕ್ತಿ ಚಿತ್ರಗಳನ್ನು ರಚಿಸುವುದು ಸುಲಭವಲ್ಲ. ಯಾಕೆಂದರೆ ಚಿತ್ರದಲ್ಲಿ ನೀವು ವ್ಯಕ್ತಿಯನ್ನು ತೋರಿಸ ಬಹುದು. ಆದರೆ ಆ ವ್ಯಕ್ತಿಯ ಹಾವಭಾವಗಳನ್ನು ತೋರಿಸಬೇಕು. ಒಂದು ವೇಳೆ ಅಲ್ಲಿ ಭಾವನೆ ಇರಲಿಲ್ಲವೆಂದರೆ ಅದು ಕಲಾಕೃತಿ ಎನಿಸಲಿಕ್ಕೆ ಯೋಗ್ಯವಲ್ಲದಂತಾಗುತ್ತದೆ. ಅದಕ್ಕೆ ವ್ಯಕ್ತಿ ಚಿತ್ರಗಳಲ್ಲಿ ಭಾವನೆ ಪ್ರಧಾನವಾಗಿರುತ್ತದೆ.

ಇದೇ ರೀತಿಯ ತಂತ್ರವಿಧಾನವನ್ನು ಬಳಸಿಕೊಂಡು ಇವರು ಸಾಕಷ್ಟು ಅಂದರೆ ನೂರಾರು ನಿಸರ್ಗ ಚಿತ್ರಗಳನ್ನು ಮತ್ತು ಭಾವಚಿತ್ರಗಳನ್ನು ಚಿತ್ರಿಸಿದ್ದಾರೆ. ಈ ತಂತ್ರ ವಿಧಾನಕ್ಕೆ ಇವರು ಬಳಸುವ ವರ್ಣಗಳು ಹೀಗಿವೆ. Burnt umber, vyndake brown, cobalt blue, sapgreen, emarald green, yellow ochre, crimsonloke, flake white ಮುಂತಾದ ವರ್ಣಗಳನ್ನು ಬಳಸಿಕೊಂಡು ಕಲಾಕೃತಿಗಳನ್ನು ರಚಿಸಿದ್ದಾರೆ. ಈ ಬಣ್ಣಗಳನ್ನು ಪಾಶ್ಚಾತ್ಯ ಕಂಪನಿಗಳಿಂದ ಇಂತಿಷ್ಟು ಟ್ಯಾಕ್ಸ್ ಕಟ್ಟಿ ಕರ್ನಾಟಕಕ್ಕೆ ತರಿಸಿಕೊಳ್ಳುತ್ತಿದ್ದರು. ಇವರು ಕಾಗದ, ಬಣ್ಣ, ಕ್ಯಾನವಾಸ್, ಬ್ರಷ್ ಎಲ್ಲವನ್ನು ಪಾಶ್ಚಾತ್ಯ ದೇಶದ ಪ್ರಸಿದ್ಧ ಕಂಪನಿಗಳಿಂದ ಆಮದು ಮಾಡಿಕೊಳ್ಳುತ್ತಿದ್ದರು. ಈ ಬಣ್ಣಗಳಿಂದ ಪ್ರಕೃತಿ ಚಿತ್ರಗಳನ್ನು ಮತ್ತು ವ್ಯಕ್ತಿಚಿತ್ರಗಳನ್ನು ರಚಿಸುತ್ತಿದ್ದರು. ಇವರು ಸಂಯೋಜನೆ ಚಿತ್ರಣ ಮಾಡಿರಬಹುದೇನೋ ಅವುಗಳು ಇಲ್ಲಿಯವರೆಗೂ ಎಲ್ಲೂ ಕಂಡುಬಂದಿಲ್ಲ.

ರುಮಾಲೆಯವರು ವ್ಯಕ್ತಿಚಿತ್ರಣವನ್ನು ರಚಿಸುವಾಗ ರೂಪದರ್ಶಿಯನ್ನು ಮುಂದೆ ಕೂರಿಸಿ, ಅವರಿಗೆ ಯೋಗ್ಯವೆನಿಸಿದ ರೀತಿಯಲ್ಲಿ ಕೂರಿಸಿ, ಚಿತ್ರರಚನೆ ಮಾಡುತ್ತಿದ್ದರು. ಚಿತ್ರ ರಚನೆ ಮಾಡುವ ಸಂದರ್ಭದಲ್ಲಿ ಕೆಲವು ಭಾಗದಲ್ಲಿ ದಪ್ಪವಾಗಿ ಬಳಸಿ ಇನ್ನು ಕೆಲವು ಬಾಗದಲ್ಲಿ ತುಂಬಾ ಮೃದುವಾಗಿ, ಒಂದೇ ತರನಾದ ಪ್ರಕೃತಿ ಚಿತ್ರಗಳನ್ನು ಆಧರಿಸಿ ಚಿತ್ರಿಸಿದ ಕಲಾಕೃತಿಗಳಾಗಿವೆ. ಈ ಸಂದರ್ಭಗಳಲ್ಲಿ ಇವರು ಬಣ್ಣವನ್ನು ಹಚ್ಚುವಾಗ ತೇವವಾಗಿ ಪೇಪರ್ ಅಥವಾ ಕ್ಯಾನ್‌ವಾಸ್‌ನ ಮೇಲೆಯೇ ಬ್ರೆಷ್‌ನಿಂದ ಮಿಶ್ರಣ ಮಾಡಿಕೊಳ್ಳುತ್ತಿದ್ದರು. ಉದಾಹರಣೆಗೆ ವ್ಯಕ್ತಿಯ ಚಿತ್ರರಚನೆ ಮಾಡುವ ಸಂದರ್ಭದಲ್ಲಿ ಮುಖದ ಬಣ್ಣವನ್ನು ಹಚ್ಚುವಾಗ ಅದಕ್ಕೆ ಬೇಕಾದ ವರ್ಣಗಳನ್ನು ಅಲ್ಲಿಯೇ ಅಚ್ಚಿ ಅದರಲ್ಲಿಯೇ ಮಿಶ್ರಣ

ಮಾಡುವ ವಿಶೇಷ ತಂತ್ರವನ್ನು ಬಳಸುತ್ತಿದ್ದರು. ಅಲ್ಲದೆ ಕೆಲವೊಮ್ಮೆ ನೈಫ್‌ಗಳ ಮೂಲಕ ವರ್ಣಗಳ ಮಿಶ್ರಣವನ್ನು ಮಾಡಿ ಕೃತಿರಚನೆ ಮಾಡುತ್ತಿದ್ದರು. ಜಲವರ್ಣದಲ್ಲೂ ಕೂಡ ಕೆಲವು ಕಲಾಕೃತಿಗಳಲ್ಲಿ ಈ ತಂತ್ರವನ್ನು ಉಪಯೋಗಿಸಿ ಮಾಡಿದ್ದಾರೆ. ಇನ್ನೂ ಕೆಲವು ತಿಳಿ ನೀರಿನಂತೆ ಉಪಯೋಗಿಸಿದ್ದಾರೆ.

ಕೇವಲ ರೇಖೆಗಳ ಗತಿ ಬರೀ ಚಿತ್ರರಚನೆ ಪದ್ಧತಿ ಮತ್ತು ವರ್ಣ ಸಾಮರಸ್ಯದ ವಿಂಗಡನೆಗಳಿಂದಲೇ ಕಲಾಕೃತಿಗಳ ರೂಪು-ರೇಷೆಯನ್ನು ಗುರುತಿಸಲು ಅಸಾಧ್ಯವಾದದ್ದು ಯಾವುದೇ ಕಲಾಕೃತಿಯಲ್ಲಿಯ ಆಕಾರ ವರ್ಣಗಳ ತಾಳ-ಮೇಳ ವಿಷಯಗಳ ಸ್ವಂತಿಕೆ ತಾಂತ್ರಿಕತೆ ಕಲೆಯ ಒಲ ಅರ್ಥಗಳನ್ನು ನಾವು ಸೂಕ್ಷ್ಮವಾಗಿ ಗುರುತಿಸಲೇಬೇಕು. ಕೇವಲ ಆಕಾರ ಪ್ರಮಾಣಬದ್ಧವಾಗಿದ್ದರೆ ಮಾತ್ರ ಸಾಲದು. ಬಣ್ಣಗಳ ಹರವಿಕೆಯಲ್ಲಿಯ ತಾಳ-ಮೇಳದಲ್ಲಿ ಸಮತೋಲನವೂ ಅಷ್ಟೇ ಪ್ರಧಾನ ಪಾತ್ರವಹಿಸುತ್ತದೆ. ಇಲ್ಲಿ ದೊಡ್ಡ ಮತ್ತು ಚಿಕ್ಕ ಗಾತ್ರದ ಚಪ್ಪಟೆಯಾದ ಕುಂಚದಿಂದ ಬಣ್ಣವನ್ನು ತೆಳುವಾಗಿ ಕೆಲವು ಕಡೆ ಒರಟಾಗಿ ಒರೆಸುತ್ತಾ ಹೋಗಿದ್ದಾರೆ. ಅವು ನೋಡಿದರೆ ಅಗಲವಾದ ಮತ್ತು ಉದ್ದವಾದ ಪಟ್ಟಿಗಳ ಆಕಾರಗಳಂತೆ ಕಂಡರೂ ಅವು ನೋಡುವುದಕ್ಕೆ ಕಣ್ಣಿಗೆ ಒಂದು ರೀತಿಯ ಮುದವನ್ನು ಕೊಡತ್ತವೆ. ಇಲ್ಲಿ ಬಳಸಿದ ತಂತ್ರ ವಿಧಾನವನ್ನು ನಾವು ಗಮನಿಸಿದಾಗ ಪಾಶ್ಚಾತ್ಯ ಕಲಾವಿದ ವ್ಯಾನ್‌ಗಾಗೂ ಬಳಸಿದ ರೀತಿಯನ್ನು ಇವರು ಕೆಲವು ಕಲಾಕೃತಿಯಲ್ಲಿ ಅನುಸರಿಸಿ ನಂತರದ ದೀನಗಳಲ್ಲಿ ಅವರದೇ ಆದ ತಂತ್ರವನ್ನು ಬಳಸಿದ್ದಾರೆ ಅನ್ನಿಸುತ್ತದೆ. ಹೀಗೆ ರುಮಾಲೆಯವರು ಪ್ರತಿಯೊಂದು ಕಲಾಕೃತಿಯನ್ನು ತಮ್ಮದೇ ಆದ ತಂತ್ರ ವಿಧಾನದೊಂದಿಗೆ ಕಲಾಕೃತಿಗಳನ್ನು ರಚಿಸುತ್ತಾ ಬಂದಿರುವುದನ್ನು ಗಮನಿಸಬಹುದಾಗಿದೆ.

**ರುಮಾಲೆಯವರ ಒಟ್ಟಾರೆ ಕಲಾಕೃತಿಗಳ ಅಧ್ಯಯನದಿಂದ ಕಂಡುಬರುವ ಪ್ರಮುಖ ಅಂಶಗಳು**

ಸಾಂಪ್ರದಾಯಿಕವೆ ಅಮೂರ್ತರೂಪದ 'ಕಲೆ' ಎಂಬ ವರ್ಗೀಕರಣ ಇಂದಿನ ಸಮಕಾಲೀನ ಕಲಾ ಸಂದರ್ಭದಲ್ಲಿ ಕೇಳಿ ಬರುತ್ತಿದೆಯಾದರೂ ಕಲಾವಿದರ ವೈಯಕ್ತಿಕ ಮನೋಧರ್ಮದ ಮೇಲೆ ಅವರವರ ಆಯ್ಕೆಯಾಗುತ್ತದೆ. ರುಮಾಲೆಯವರ ನೈಜಕಲೆಯಲ್ಲಿ ವಿಶೇಷವಾಗಿ ತಮ್ಮನ್ನ ತೊಡಗಿಸಿಕೊಂಡು ಕಲಾಕೃತಿರಚನೆ ಮಾಡಿದ್ದಾರೆ. ಯಾವುದೇ ಪರಂಪರೆ ಇಲ್ಲದೆ ಯಾವ ಕಲೆಗಳು ಬೆಳೆಯುವುದಿಲ್ಲ. ಪರಂಪರೆ ಎನ್ನುವುದನ್ನು ಕಟ್ಟಡಕ್ಕಿರುವ ಭದ್ರ ತಳಹದಿ ಇದ್ದಂತೆ. ಇಂದು ನಿನ್ನೆಯದರ ಮುಂದುವರಿಕೆ ಎಂಬುದು ಗಮನಾರ್ಹ ಅಂಶವಾಗಿದೆ.

ರುಮಾಲೆಯವರು ರನ್ನ ನಾಡಿನ ಮಹಾನ್ ಕಲಾವಿದ, ಕಲಾತಪಸ್ವಿ ಕರ್ನಾಟಕದ ವ್ಯಾನ್‌ಗಾಗೂ ಎಂದು ಕರೆಯುತ್ತಾರೆ. ಇದಕ್ಕೆ ಕಾರಣ ಇವರ ಚಿತ್ರಗಳ ವಸ್ತು-ಶೈಲಿ. ಇಂತಹ ನೈಜಕಲೆಯ ಪರಂಪರೆಯಲ್ಲಿ ನೆಡೆದವರು ಎಸ್.ಎಂ. ಪಂಡಿತ, ಜೆ.ಎಸ್. ದಂಡಾದಲೆ, ಅಮೀನ ಸಾಹೇಬ ಕಮಡೊಳ್ಳಿ, ಪಿ.ಜಿ. ಬಡಿಗೇರ, ಎಂ.ವಿ. ಮಿಣಚಗಿ, ವೈ. ಸುಬ್ರಹ್ಮಣ್ಯರಾಜು, ಎಂ.ಟಿ.ವಿ. ಆಚಾರ್ಯ ನಂಜುಂಡಸ್ವಾಮಿ,

ಪಿ.ಆರ್. ತಿಪ್ಪೇಸ್ವಾಮಿ ಇನ್ನು ಅನೇಕರು ಅಂತದರ ಸಾಲಿನಲ್ಲಿ ಇವರದು ಒಂದು ನೈಜ ಕಲೆಯಲ್ಲೇ ಒಂದು ವಿಶೇಷ ಶೈಲಿಯ ಆಕಾರವನ್ನು ಸೃಷ್ಟಿಸಿದ ಧೀಮಂತ ಚಿತ್ರಕಾರ.

ರುಮಾಲೆಯವರು ಒಬ್ಬ ಚಳುವಳಿಕಾರರಾಗಿ, ಸೇವಾದಳದ ಸಂಸ್ಥಾಪಕರಾಗಿ ಒಬ್ಬ ಸಮಾಜ ಮುಖಿಯಾಗಿ ಹಾಗೂ ಒಬ್ಬ ಶ್ರೇಷ್ಠ ಕಲಾವಿದರಾಗಿ ತಮ್ಮ ಸಮಕಾಲೀನ ಕಲೆಯನ್ನು ಬದುಕಿಸಿಕೊಂಡು ಮುಂದುವರಿಸಿಕೊಂಡು ಬಂದಂತವರಲ್ಲಿ ಪ್ರಮುಖರು. ಕಲೆಗಳಲ್ಲಿ ಸಮಕಾಲೀನತೆಯ ಪ್ರಸ್ತುತತೆ ಅಗತ್ಯವಾಗಿ ಇರಲೇಬೇಕಾದಂತ ಒಂದು ಮೌಲ್ಯ. "ಒಬ್ಬ ಕಲಾವಿದ ತನ್ನ ಕಾಲದ ವಿಶಿಷ್ಟ ಜೀವಧ್ವನಿಗೆ ಸವಾಲುಗಳಿಗೆ ತನ್ನನ್ನು ಸಮ್ಮುಖವಾಗಿಸಿಕೊಂಡು ಅಭಿವ್ಯಕ್ತಿಸುವ ಮೂಲಕ ಆ ಕಾಲ ಕುರಿತು ಅವನ ಧೋರಣೆ ಅಥವಾ ನಿಲುವು ದಾಖಲಿಸುವ ಸಾಧ್ಯತೆಗಳಿವೆ. ಇಂಥ ಕೃತಿಯ ಸಮಕಾಲೀನ ದಾಖಲೆಯಾಗಿ ಹೆಚ್ಚು ಮಹತ್ವ ಪಡೆಯುತ್ತಿದೆ." ರುಮಾಲೆಯವರ ಕಲಾಕೃತಿ ರಚನೆಯ ಧೋರಣೆ ನಿಲುವುಗಳನ್ನು ಅವರ ಚಿತ್ರಗಳ ಮುಖಾಂತರ ತಿಳಿದುಬರುತ್ತದೆ.

ಕಲಾಕೃತಿಯ ಕಲಾವಿದನ ಸಮಗ್ರ ಪ್ರತಿಬಿಂಬ, ಒಂದು ಚಿತ್ರವೆಂದರೆ ಆತನ ಆತ್ಮ ದೃಷ್ಟಿಗೆ ಬೋಧನೆಯಾದ ಒಂದು ದೃಶ್ಯ ಹೇಗೆ ಕಲಾಕೃತಿಯು ಕಲಾವಿದನ ಸಮಗ್ರ ಜೀವನದ ಪ್ರತಿಬಿಂಬವೊ ಹಾಗೆಯೇ ದೃಶ್ಯ. ಹೀಗೆ ಕಲಾವಿದನು ಸಮಗ್ರ ಜನಾಂಗದ ಪ್ರತಿಬಿಂಬ. ಸಮಾಜದ ಅಂತಃ ಚಕ್ಷುವೇ ಕಲಾವಿದನೆಂದರೆ ತಪ್ಪಲ್ಲ." ಆದ್ದರಿಂದ ಆಗಿನ ಸಮಾಜ ಯಾವುದನ್ನು ಒಪ್ಪಿಕೊಳ್ಳುತ್ತಿತ್ತೋ ಅದನ್ನು ಕಲಾವಿದರು ಚಿತ್ರಿಸಿದರು. ಮತ್ತು ಅದರ ಬಗ್ಗೆ ಅವರಿಗೆ ಸಮಾಧಾನ ತೃಪ್ತಿಯು ಇತ್ತು ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

### ರುಮಾಲೆ ಚೆನ್ನಬಸವಯ್ಯನವರು ಕಲಾಕೃತಿ ರಚಿಸಲು ಬಳಸಿದ ಕಲಾ ಸಾಮಾಗ್ರಿಗಳು

ಇಲ್ಲಿಯವರೆಗೆ ಅವರ ಜಲವರ್ಣ, ತೈಲವರ್ಣ ಮಾದ್ಯಮದಲ್ಲಿ ಅವರದೇ ಆದ ಶೈಲಿ ವಿಶೇಷತೆ, ವಿನ್ಯಾಸ, ವರ್ಣಗಳ ಬಳಕೆ, ಲಯಬದ್ಧತೆ ಮುಂತಾದ ವಿಷಯಗಳನ್ನು ಅವರ ಕಲಾಕೃತಿಗಳ ಮೂಲಕ ತಿಳಿದುಕೊಳ್ಳಬೇಕಾಗುತ್ತದೆ. ಹಾಗೂ ಅವರು ಅಂತಹ ಪರಿಣಾಮ ಬೀರುವಂತ ಚಿತ್ರಗಳಿಗಾಗಿ ಬಳಸಿರುವ ಸಾಧನೆಗಳ ಬಗ್ಗೆಯೂ ತಿಳಿದುಕ್ಕೊಳುವುದು ಅವಶ್ಯವಾಗಿದೆ.

#### ಜಲವರ್ಣಕ್ಕಾಗಿ ಬಳಸಿದ ಕಾಗದಗಳು

ರುಮಾಲೆ ಅವರು ಪಾರದರ್ಶಕ ಟ್ಯೂಬ ಜಲವರ್ಣವನ್ನು ಬಳಸಿ ಚಿತ್ರ ರಚಿಸಿದ್ದಾರೆ. ಇಂತಹ ವರ್ಣಗಳನ್ನು ಉಪಯೋಗಿಸುವಾಗ ಅದಕ್ಕೆ ತಕ್ಕಂತಹ ಕಾಗದಗಳನ್ನು ಬಳಸಿದ್ದಾರೆ. ಪಾರದರ್ಶಕ ಜಲವರ್ಣ ನಿಸರ್ಗ ಚಿತ್ರ ರಚಿಸುವಲ್ಲಿ ಅದಕ್ಕಾಗಿಯೇ ವಿಶೇಷವಾಗಿ ತಯಾರಿಸಿದ ಕೈ ಕಾಗದ (Hand made paper) ವನ್ನು, ಬಳಸಿದ್ದಾರೆ. ಈ ಕಾಗದವು ಸಾಕಷ್ಟು ದೃಢತೆಯನ್ನು ಹೊಂದಿರುವಷ್ಟೇ ಅಲ್ಲ ಕಾಗದಗಳಲ್ಲಿ ಅನೇಕ ಸಾರಿ ಜಲವರ್ಣವನ್ನು ಲೇಪಿಸಿದರೂ ಕೂಡಾ ಶಿಥಿಲಗೊಳ್ಳುವುದಿಲ್ಲ. ಈ ಬಗೆಯ ಕಾಗದಗಳಲ್ಲಿ

ಜಲದೊಂದಿಗೆ ವರ್ಣಗಳೂ ಆಳ ಪದರಗಳಿಗೆ ಇಳಿದು ಸ್ಥಿರವಾಗಿ ನಿಲ್ಲುತ್ತವೆ. ಅಂತೆಯೇ ಎಷ್ಟೋ ವರ್ಷಗಳಾದರೂ ಅವು ಇಂದಿಗೂ ತಾಜಾತನವನ್ನು ಹೊಂದಿವೆ. ಇನ್ನು ಅಪಾರದರ್ಶಕಗಳಾದ ಕಲಾಕೃತಿ ಗಳನ್ನು ಜಲವರ್ಣದಲ್ಲಿಯೇ ಬಳಸುವಾಗ ಬಿಳಿಬಣ್ಣವನ್ನು ಮಿಶ್ರಣ ಮಾಡಿಕೊಂಡು ಆ ಬಣ್ಣವನ್ನೇ ಒಂದು ಛಾಯೆಯಾಗಿ ಬಳಸಿಕೊಂಡಿದ್ದಾರೆ. ಇನ್ನು ಕೆಲವು ಚಿತ್ರಗಳಿಗೆ ಕಾಗದಗಳನ್ನು ಬಳಸಿದ್ದಾರೆ. ಹೀಗೆ ಒಟ್ಟಾರೆಯಾಗಿ ಅವರು ಚಿತ್ರಿಸಿದ ಚಿತ್ರದ ಪರಿಣಾಮ ಅದರಲ್ಲಿ ಮೂಡಿಬಂದಿದೆ.

**ತೈಲವರ್ಣ ಚಿತ್ರಗಳಿಗಾಗಿ ಉಪಯೋಗಿಸಿದ ಕಾಗದ ಹಾಗೂ ಕ್ಯಾನ್‌ವಾಶ್‌ಗಳು**

ತೈಲವರ್ಣ ಚಿತ್ರಗಳಿಗಾಗಿಯೇ ಕಾಗದವನ್ನು ತಯಾರಿಸುತ್ತಾರೆ. (Oil paper) ಈ ಕಾಗದಗಳು ಒಂದು ರೀತಿಯ ಒರಟು ಮೇಲ್ಮೈಯನ್ನು ಹೊಂದಿದ್ದು ವರ್ಣಗಳು ಆಳಕ್ಕೆ ಇಳಿದು ಬಿಗಿಯಾಗಿ ಕಾಗದವನ್ನು ಹಿಡಿದುಕೊಳ್ಳುತ್ತವೆ. ಅಲ್ಲದೇ ಈ ಕಾಗದಗಳು ತೈಲವನ್ನು ಹೀರಿಕೊಳ್ಳದೆ ಆ ಹೊಳಪನ್ನು ಹಾಗೆ ಇರಲು ಸಹಾಯ ಮಾಡುತ್ತದೆ. ಕೆಲವು ಆರಂಭದ ಚಿತ್ರಗಳಿಗೆ ಇಂತಹ ಕಾಗದ ಉಪಯೋಗಿಸಿದ್ದಾರೆ. ಹೆಚ್ಚಾಗಿ ತೈಲಚಿತ್ರಗಳನ್ನು ಕ್ಯಾನ್‌ವಾಶ್‌ನ ಮೇಲೆಯೇ ಚಿತ್ರಿಸಿದ್ದಾರೆ. ಈ ಕ್ಯಾನ್‌ವಾಶ್‌ಗಳು ವಿವಿಧ ಅಳತೆಗಳಲ್ಲಿ ಸಿದ್ದವಾಗಿಯೇ ಸಿಗುತ್ತವೆ. ಕೆಲವು ಸಾರಿ ಕಲಾವಿದರೇ ಅದನ್ನು ತಯಾರಿಸಿಕೊಳ್ಳಬಹುದು. ಇನ್ನೂ ಕೆಲವು ಹಾರ್ಡ್‌ಬೋರ್ಡ್ ಮೇಲೆ ನೇರವಾಗಿ ಉಳಿದಂತ ವರ್ಣಗಳನ್ನು ಲೇಪಿಸಿಯೂ ಚಿತ್ರಗಳನ್ನು ರಚಿಸಿದ್ದಾರೆ.

ರುಮಾಲೆಯವರ ಕಲಾಕೃತಿಗಳು ನಮ್ಮ ನಾಡಿನ ಆಸ್ತಿ ಹೀಗಿರಲು ಅವುಗಳ ಸಂರಕ್ಷಣೆ ಬಹಳ ಮಹತ್ವವಾದದ್ದು. ರುಮಾಲೆ ಅವರ ಕಲಾಕೃತಿಗು ಅವರ ಮನೆಯ ಮಂದಿಗಷ್ಟೇ ಸಂಬಂಧಿಸಿದ್ದವುಗಳಲ್ಲಿ ಅವು ಸಮಾಜಕ್ಕೂ ಸಂಬಂಧಿಸಿದವು. ಆದ್ದರಿಂದ ಅವುಗಳ ರಕ್ಷಣೆಯನ್ನು ಮಾಡುವಲ್ಲಿ ಈಗ ಸಂಜಯ್ ಕಭೆ ಅವರು ನಿರತರಾಗಿದ್ದಾರೆ. ಕಲಾಕೃತಿ ರಕ್ಷಣೆಗೆ ಸರ್ಕಾರವಾಗಲಿ ಅಥವಾ ಅಕಾಡೆಮಿಯಾಗಲಿ ಇವರ ಕಲಾಕೃತಿಗಳ ರಕ್ಷಣೆಗೆ ಗಮನ ಹರಿಸಬೇಕು.

## ಅಧ್ಯಾಯ ಆರು

# ಸಮಾರೋಪ

ದೊಡ್ಡಬಳ್ಳಾಪುರದ ಪರಿಸರ ಅನೇಕ ಸೃಜನಶೀಲರಿಗೆ ನೆಲೆ ಒದಗಿಸಿಕೊಟ್ಟು, ಸೃಜನಶೀಲತೆಗೆ ಪ್ರೇರಣೆ ನೀಡಿದನು. ಈ ನೆಲದಲ್ಲಿ ಬೆಳೆದವರು ರುಮಾಲೆ ಚೆನ್ನಬಸವಯ್ಯನವರು. ಸಾಧನೆಯ ಪರ್ವ ಈ ನೆಲದಲ್ಲಿ ಹುಟ್ಟಿ, ಈ ನೆಲದಲ್ಲೇ ಅಂತ್ಯಗೊಂಡಿರುವುದು ಇಂದು ನಾವು ನೋಡಬಹುದಾಗಿದೆ. ಅಂತ್ಯ ಎಂಬುದಕ್ಕೆ ಹಲವು ಬಗೆಯ ಅರ್ಥವನ್ನು ನೀಡಬಹುದಾಗಿದೆ. ರುಮಾಲೆಯವರು ಸೃಷ್ಟಿಸಿದ್ದು ಸಾಕಷ್ಟು ಆದರೆ ಲಭ್ಯವಾಗುವುದು ಎಳ್ಳಷ್ಟು. ಅವರ ಬದುಕಿನ ಸಾಹಸ ಗಾಥೆಯನ್ನು ಹೇಳುವ ಕಲಾಶಾಲೆ ಬೇರೆ ಕಾರಣಗಳಿಗಾಗಿ ತನ್ನ ನಿಜ ಸ್ವರೂಪವನ್ನು ಬದಲಿಸಿಕೊಂಡಿದ್ದಾರೆ ಉಳಿದಿದ್ದು ಕೆಲವು ಮಾತ್ರ! ಅವೇ ಈ ಅಧ್ಯಯನದ ಆಹಾರ.

ಕನ್ನಡದ ನೆಲದಲ್ಲಿ ಆಗಿಹೋದ ಕಲಾವಿದರು ಸಾವಿರಾರು ಜನ ಚಿರಸ್ಥಾಯಿಯಾದವರು ಕೆಲವು ಜನ! ಅವರಲ್ಲಿ ರುಮಾಲೆ ಅವರು ಕೂಡ ಒಬ್ಬರು. ರುಮಾಲೆ ಅವರು ಕೇವಲ ಒಬ್ಬ ವ್ಯಕ್ತಿಯಾಗಿ ಗೋಚರವಾಗಲಿಲ್ಲ, ಒಂದು ಅದ್ಬುತ ಶಕ್ತಿಯಾಗಿ ಗೋಚರವಾದದ್ದು, ಅವರ ಸೃಜನಶೀಲತೆಯಲ್ಲಿ ಸಂಘಟನೆಯ ಚಾತುರ್ಯದಲ್ಲಿ ಕಲೆಯ ಗಂಧಗಾಳಿ ಇಲ್ಲದ ಸ್ವಾತಂತ್ರ್ಯೋತ್ತರ ಕಾಲದ ದೊಡ್ಡಬಳ್ಳಾಪುರ ಮತ್ತು ಬೆಂಗಳೂರಿನಲ್ಲಿ ಕಲಾಪರಂಪರೆಯನ್ನು ಹುಟ್ಟಿ ಹಾಕಿದ ರುಮಾಲೆಯವರ ಸಾಹಸವನ್ನು ಇಂದು ನಾವು ನೆನೆಯಬೇಕು.

ಕನ್ನಡದ ನೆಲದ ದುರಂತವೋ ಏನೋ ಈ ನೆಲದ ಕಲಾವಿದರು ಎಷ್ಟೇ ಪ್ರತಿಭಾವಂತರಾಗಿದ್ದರೂ

ಕೂಡ ಅವರನ್ನು ಚಿರಸ್ಥಾಯಿಯನ್ನಾಗಿಸುವ ಕಾರ್ಯ ಕನ್ನಡಿಗರಿಂದ ಆಗಿಲ್ಲವೆಂದು ದಿಟ್ಟತನದಿಂದ ಹೇಳಬಹುದು. ಹಿಂದಿನ ಶತಮಾನದ ಸುಮಾರು ೭೦ ದಶಕದಲ್ಲಿ ಕಲಾವಿದರ ಕುರಿತು ಪರಿಚಯಾತ್ಮಕ ಗ್ರಂಥಗಳನ್ನು ಲಲಿತ ಕಲಾ ಅಕಾಡೆಮಿ ಪ್ರಕಟಿಸಿದ್ದೇ ಅದ್ಭುತ ಸಾಧನೆಯಾಯಿತು. ಪಾಶ್ಚಾತ್ಯರಲ್ಲಿಯಂತೆ ಸಮಗ್ರವಾಗಿ ಕಲಾವಿದರ ಕಲಾಕೃತಿಗಳನ್ನು ದಾಖಲಿಸುವ ಕಾರ್ಯ ನಮ್ಮಲ್ಲಿ ನಡೆದದ್ದು ತುಂಬಾ ಅಪರೂಪ. ಆದರೆ ೯೦ರ ದಶಕದ ಆರಂಭದಲ್ಲಿ ಕಲೆಯ ಕುರಿತಾದ ಸಂಶೋಧನಾತ್ಮಕ ಪ್ರಬಂಧಗಳು ಮೆಲ್ಲ ಮೆಲ್ಲಗೆ ಬೆಳಕಿಗೆ ಬರುತ್ತಲಿವೆ. ಕಾರಣ ಕನ್ನಡ ವಿಶ್ವವಿದ್ಯಾಲಯದಲ್ಲಿ ಲಲಿತಕಲೆಯ ಸ್ನಾತಕೋತ್ತರ ಪದವಿ ತರಗತಿಗಳು ಪ್ರಾರಂಭವಾಗಿ, ಎಂ.ಫಿಲ್, ಪಿಎಚ್.ಡಿ, ಅಧ್ಯಯನಕ್ಕೆ ತಾತ್ವಿಕವಾಗಿ ಒಪ್ಪಿಗೆ ದೊರೆತ ಮೇಲೆ ಸಂಘುಬಂಧಗಳು ಮಹಾಪ್ರಬಂಧಗಳಲ್ಲಿ ರುಮಾಲೆ ಚೆನ್ನಬಸವಯ್ಯನವರ ಪ್ರಬಂಧವೂ ಒಂದು.

ರುಮಾಲೆ ಅವರು ವೃತ್ತಿಯೊಂದಿಗೆ ಹಲವಾರು ಪ್ರವೃತ್ತಿಗಳನ್ನು ಮೈಗೂಡಿಸಿಕೊಂಡು ಬಂದಿದ್ದಾರೆ. ಕೇವಲ ಒಬ್ಬ ಕಲಾವಿದನಾಗದೇ, ಜೊತೆಗೆ ಕಲಾವಿಮರ್ಶಕರಾಗಿ ತಾಯಿನಾಡು ಪತ್ರಿಕೆಯ ಸಂಪಾದಕರಾಗಿ ಸ್ವಾತಂತ್ರ್ಯ ಚಳುವಳಿಯ ಚಳುವಳಿಕಾರರಾಗಿ ಸಾವದಳದ ಸಂಘದ ಮೂಲ ಪುರುಷರಾಗಿ ಹಾಗೂ ಮೂರು ವರ್ಷ ಎಂ.ಎಲ್.ಸಿ. ಆಗಿ ನಮ್ಮೆಲ್ಲರ ನಡುವೆ ಬಾಳಿದರು. ಇಂತಹ ಹತ್ತು ಹಲವು ಕ್ಷೇತ್ರಗಳೊಂದಿಗೆ ತೊಡಗಿಸಿಕೊಂಡು ಚಿತ್ರಕಲಾ ಕ್ಷೇತ್ರದಲ್ಲಿ ಅತ್ಯಂತ ಉನ್ನತ ಮಟ್ಟದ ಸಾಧನೆಗೈದ ಹಿರಿಯ ಕಲಾವಿದ ರುಮಾಲೆ ಚೆನ್ನಬಸವಯ್ಯನವರ ಜೀವನ, ಸಾಧನೆಯ ಹಾದಿ, ಚಿತ್ರಕಲಾಕ್ಷೇತ್ರಕ್ಕೆ ಅವರು ನೀಡಿದ ಕೊಡುಗೆಯನ್ನು ದಾಖಲೀಕರಣ ಮಾಡುವ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ಎರಡು**

ಸಾಂಸ್ಕೃತಿಕ ಪರಿಸರ, ಬಾಲ್ಯಜೀವನ ಮತ್ತು ಕಲಾಶಿಕ್ಷಣ ಈ ಅದ್ಯಾಯದಲ್ಲಿ ರುಮಾಲೆಯವರ ಸಾಂಸ್ಕೃತಿಕ ಪರಿಸರ, ಅವರ ಜನ್ಮ ಸ್ಥಳ, ಬಾಲ್ಯ ಜೀವನ, ತಂದೆ-ತಾಯಿಯ ಕೌಟಂಬಿಕ ಹಿನ್ನೆಲೆ, ಪ್ರಾಥಮಿಕ ಮತ್ತು ಪ್ರೌಢಶಾಲೆಯ ಸಂದರ್ಭದಲ್ಲಿ ಜೀಸಸ್‌ನ ಚಿತ್ರವನ್ನು ಬರೆದು ಬಹುಮಾನ ಪಡೆದುಕೊಂಡಿದ್ದರು. ನಂತರ ಚಿತ್ರಕಲಾ ಶಿಕ್ಷಣಕ್ಕೆ ಬೆಂಗಳೂರು ಕಲಾಮಂದಿರದ ಕಲಾಶಿಲೆಯಲ್ಲಿ ಡ್ರಾಯಿಂಗ್ ಮತ್ತು ಡೇಟಿಂಗ್ ವಿಷಯ ಆರಿಸಿಕೊಂಡು ಅಧ್ಯಯನ ಮಾಡಿದರು. ಆಗಿನ ಕಾಲದ ಪಠ್ಯಕ್ರಮ, ಅಧ್ಯಾಪಕ ವರ್ಗ, ಅವರು ಚಿತ್ರಗಳನ್ನು ರಚಿಸುವ ಶೈಲಿ, ಅಲ್ಲಿಯ ಕಲಾವಾತಾವರಣ, ಚಿತ್ರಪ್ರದರ್ಶನದ ರೀತಿ ಮುಂತಾದ ವಿವರಣೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅಲ್ಲದೆ ಆಗ ಅಲ್ಲಿ ಕರ್ನಾಟಕದ ಕೆಲವು ಶ್ರೇಷ್ಠ ಕಲಾವಿದರಲ್ಲಿ ರುಮಾಲೆ ಅವರು ಒಬ್ಬರಾಗಿದ್ದರು.

**ಅಧ್ಯಾಯ ಮೂರು**

**ರುಮಾಲೆ ಚೆನ್ನಬಸವಯ್ಯನವರ ಕಲಾಕೃತಿಗಳ ಹರವು ವಸ್ತುವಿಷಯ :** ಪ್ರಸ್ತುತ ಅಧ್ಯಾಯದಲ್ಲಿ ರುಮಾಲೆಯವರ ತಮ್ಮ ಶೈಕ್ಷಣಿಕ ಬದುಕಿನ ಮಧ್ಯದಲ್ಲಿ ರಚಿಸಿದ ವರ್ಣಚಿತ್ರಗಳ ಕುರಿತಾದ ವಿಶ್ಲೆಷಣೆ ಮಾಡಲಾಗಿದೆ. ಇದರಲ್ಲಿ ಅವರ ಕಲಾಕೃತಿಗಳನ್ನು ಈ ಕೆಳಗಿನಂತೆ ವರ್ಗೀಕರಿಸಿಕೊಂಡು ಇಲ್ಲಿ ಚರ್ಚಿಸಲಾಗಿದೆ.

**ವರ್ಣಚಿತ್ರಗಳು**

೧. ಜಲವರ್ಣ ಚಿತ್ರಗಳು

೨. ತೈಲವರ್ಣ ಚಿತ್ರಗಳು

**I. ಜಲವರ್ಣ ಚಿತ್ರಗಳು**

೧. ಭಾವಚಿತ್ರಗಳು

೧. ನಿಸರ್ಗ ಚಿತ್ರಗಳು

**II. ತೈಲವರ್ಣ ಚಿತ್ರಗಳು**

೧. ಭಾವಚಿತ್ರಗಳು

೧. ನಿಸರ್ಗ ಚಿತ್ರಗಳು

ಹೀಗೆಯೇ ಈ ಮೇಲಿನ ವರ್ಗೀಕರಣದಂತೆ ಚಿತ್ರಗಳನ್ನು ವರ್ಗೀಕರಿಸಿಕೊಂಡು ಕಲಾಕೃತಿಗಳನ್ನು ವಿಶ್ಲೇಷಣೆ ಮಾಡುತ್ತಾ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ನಾಲ್ಕು**

**ರುಮಾಲೆ ಚೆನ್ನಬಸವಯ್ಯನವರ ಕಲಾಕೃತಿಗಳ ಮೇಲಾದ ಪ್ರಭಾವ, ಪ್ರೇರಣೆ, ರಚನಾಶೈಲಿ ಹಾಗೂ ತಂತ್ರಗಾರಿಕೆ :**

ಈ ಅಧ್ಯಾದಲ್ಲಿ ಹಲಭಿವಿಯವರು ತಮ್ಮ ಬದುಕಿನುದ್ದಕ್ಕೂ ರಚಿಸಿದ ಸಾವಿರಾರು ಕಲಾಕೃತಿಗಳಲ್ಲಿ ತಮ್ಮ ಸುತ್ತಲಿನ ಪರಿಸರದ ಪ್ರಭಾವ ಪಡೆಯುವುದರ ಮೂಲಕ ತಮ್ಮ ಅಭಿವ್ಯಕ್ತಿಗೆ ಒಂದು ನಿರ್ಧಿಷ್ಟ ರೂಪವನ್ನು ನೀಡಿದ್ದಾರೆ. ಅಂತಹ ಪ್ರಭಾವ, ಪ್ರೇರಣೆ, ತಂತ್ರಗಾರಿಕೆಗಳ ಕುರಿತಾದ ಚರ್ಚೆಯನ್ನು ಪ್ರಸ್ತುತ ಅಧ್ಯಾಯದಲ್ಲಿ ಕೈಗೊಳ್ಳಲಾಗಿದೆ. ಕಲಾಕೃತಿ ನಿರ್ಮಾಣದ ಹಿಂದೆ ಅನುಭವ ಪ್ರಬೇಧ-ಪ್ರೇರಣೆಗಳು ಇದ್ದೇ ಇರುತ್ತವೆ. ರುಮಾಲೆ ಅವರ ಬಹುತೇಕ ಕಲಾಕೃತಿಗಳಲ್ಲಿ ಪ್ರಭಾವಗಳು ಮೂಡಿವೆ. ರುಮಾಲೆ ಅವರು ಅವರದೇ ಆದ ಒಂದು ಶೈಲಿಯಲ್ಲಿ ಕೃತಿ ರಚಿಸಿದವರು. ಇವತ್ತಿಗೂ ಅಂದಿನ ಕೃತಿಗಳನ್ನು ಗಮನಿಸಿದರೆ ಇವರದೇ ಕೃತಿ ಎಂದು ಗುರುತಿಸುವ ಅಂಶಗಳು ಎಲ್ಲಾ ಕಲಾಕೃತಿಗಳಲ್ಲಿ ಎದ್ದು ಕಾಣುತ್ತದೆ ಎಂಬುದನ್ನು ಕುರಿತು ಈ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ಆರು ಸಮಾರೋಪ**

ಈ ಅಧ್ಯಾಯದ ಪ್ರಸ್ತುತ ಸಂಶೋಧನಾ ಲಘು ಪ್ರಬಂಧದ ಆರೂ ಅಧ್ಯಾಯಗಳಲ್ಲಿ ಚರ್ಚಿತವಾದ ಫಲಿತಗಳ ವಿಶ್ಲೇಷಣೆಯನ್ನು ಮಾಡಲಾಗುವುದು.

## ಅಧ್ಯಯನದ ಫಲಿತಗಳು

* ರುಮಾಲೆ ಚೆನ್ನಬಸವಯ್ಯನವರು ತಮ್ಮ ಮನಸ್ಸಿನ ಪಕ್ವತೆಯ ಭಾವನೆಗಳಿಗೆ ತಕ್ಕಂತೆ ಬಣ್ಣಗಳನ್ನು ಆಯ್ದುಕೊಂಡಿದ್ದು, ಜಲವರ್ಣ, ತೈಲವರ್ಣಗಳಲ್ಲಿ ಚಿತ್ರಗಳನ್ನು ರಚಿಸಿದ್ದಾರೆ. ಈ ಚಿತ್ರಗಳು ಸಹೃದಯದ ಮನಸ್ಸನ್ನು ಸೂರೆಗೊಳ್ಳುವಂತೆ ವರ್ಣಸಂಯೋಜನೆ ಬಣ್ಣಗಳ ಲಯಾತ್ಮಕತೆ, ರಂಗುಗ ಘನತೆ ಕುಂಚಗಳ ಹರಿದಾಟವಿದೆ. ಹಾಗೂ ಅದ್ಭುತ ಆಳ ಆಕರ್ಷಣೆ ಮತ್ತು ಅರ್ಥವಂತಿಕೆಯನ್ನು ಹೊಂದಿದೆ.

* ಜಲವರ್ಣದ ನಿಸರ್ಗ ಚಿತ್ರಗಳಲ್ಲಿ ಅನೇಕ ವಸ್ತು ವೈವಿಧ್ಯತೆಯನ್ನು ಕಾಣುತ್ತೇವೆ. ಜೊತೆಗೆ ನೀರು, ಆಕಾರ, ಪ್ರತಿಬಿಂಬ ಅದರಂತೆ ಬಣ್ಣಗಳ ವೈವಿಧ್ಯತೆಯ ಛಾಯಾ ಮೌಲ್ಯ ದೃಶ್ಯಗಳ ಅನುಭವ ಸ್ಪಷ್ಟವಾಗಿ ಚಿತ್ರಿತವಾಗಿದೆ. ಬಣ್ಣಗಳ ಪಾರದರ್ಶಿಕೆ ವಸ್ತುಗಳ ಗುಣಧರ್ಮಕ್ಕೆ ಮೆರಗು ತಂದಿದೆ.

* ಇವರ ಚಿತ್ರಗಳ ಮುಖಾಂತರ ನಮ್ಮ ಆ ಕಾಲದ ಬೆಂಗಳೂರಿನ ಮತ್ತು ಇತರೆ ಸ್ಥಳಗಳಲ್ಲಿನ ಚಿತ್ರಣ ಹೇಗಿತ್ತು ಎಂಬುದನ್ನು ತೋರಿಸುವುದರ ಜೊತೆಗೆ ಆನಂದವನ್ನು ನೀಡುವ ಸನ್ನಿವೇಶಗಳನ್ನು ನಮ್ಮ ಕಣ್ಣ ಮುಂದೆ ನಿಲ್ಲಿಸುವ ಶಕ್ತಿ ಪಡೆದಿರುವುದನ್ನು ಕಾಣುತ್ತೇವೆ.

* ಭಕ್ತಿ ಪ್ರಧಾನವಾದ ಚಿತ್ರಗಳನ್ನು ಹೆಚ್ಚಾಗಿ ಚಿತ್ರಿಸಿ ಆಧ್ಯಾತ್ಮಿಕ ಮನೋಭಾವವನ್ನು ಬಳಸಿ ಚಿತ್ರದಲ್ಲಿ ಸೌಮ್ಯತೆಯನ್ನು ತುರುವುದು ವಿಶೇಷವಾಗಿದೆ. ಕೆಲವು ವ್ಯಕ್ತಿ ಚಿತ್ರಗಳು ನೆನಪಿಗೆ ತರುವ ಗುಣಗಳನ್ನು ಹೊಂದಿದ್ದು ಸೌಮ್ಯ ಹಾಗೂ ಪ್ರಖರ ವರ್ಣಗಳ ಹದವರಿತ ಮೇಳವಾಗಿ ಸಂಭ್ರಮ ಹಾಗೂ ವೈಭವಯುತ ಪರಿಣಾಮ ಬೀರಿವೆ.

* ಭಾವಚಿತ್ರಗಳಲ್ಲಿ ಕಣ್ಣಿನಲ್ಲಿ ಜೀವಚೈತನ್ಯ ತುಂಬಿದ್ದಾರೆ. ಎಳೆ-ಎಳೆಯಾಗಿ ಚಿತ್ರಿಸಿದ್ದಾರಲ್ಲದೆ ಬಟ್ಟೆಗಳ ಮೈವಳಿಕೆಯನ್ನು ನೈಜತೆಯನ್ನು ಮೆರೆದಿದ್ದಾರೆ. ಅನೇಕ ಚಿತ್ರಗಳಲ್ಲಿ ಕುಂಚದ ನೇರ ಹೊಡೆತಗಳಲ್ಲದೆ ಬಣ್ಣಗಳನ್ನು ಬೆರಸಿ ಮೃದುವಾಗಿ ಲೇಪಿಸಿರುವುದನ್ನು ಕಾಣುತ್ತೇವೆ. ಹಾಗೆಯೇ ತೈಲವರ್ಣಗಳ ಸಂಯೋಜನಾ ಚಿತ್ರಗಳ ಪರಿಣಾಮವನ್ನು ಕಾಣುತ್ತೇವೆ. ಇವರ ಚಿತ್ರಗಳು ವಿದೇಶಿ ಪದ್ಧತಿಯ ಕಲಾ ಶಿಕ್ಷಣದ ರೀತಿಯನ್ನು ಹೊಂದಿದ್ದರೂ ಭಾವನೆಗಳು, ಅನುಭವಗಳು ಭಾರತೀಯತೆ ಯನ್ನು ಪ್ರತಿಬಿಂಬಿಸುತ್ತದೆ.

ಹೀಗೆ ರುಮಾಲೆಯವರ ವೈವಿಧ್ಯಮಯವಾದ ಚಿತ್ರಗಳು ಅವರ ವೈಯಕ್ತಿಕ ಮನೋಧರ್ಮದ ಮೇಲೆ ನೈಜ ಕಲಾಶೈಲಿಯಲ್ಲಿ ಕಲಾಕೃತಿಗಳ ರಚನೆಯನ್ನು ಮಾಡಿದ್ದಾರೆ. ತಮ್ಮ ಕಣ್ಣಲ್ಲಿ ಮನಸ್ಸಿನ ಭಾವನೆಗಳಲ್ಲಿ ಜೀವನದ ಕಣ-ಕಣದಲ್ಲಿ ಆವರಿಸಿಕೊಂಡಿರುವ ಕಲೆಗೆ ತಮ್ಮದೇ ಆದ ವಿಶಿಷ್ಟ ಮೆರಗನ್ನು

ಕೊಟ್ಟು ಆಹ್ಲಾದಾಕಾರ ರೀತಿಯಲ್ಲಿ ಮನಸ್ಸಿಗೆ ಆನಂದವನ್ನು ನೀಡುವಂತ ಜನ-ಮನ ಸೂರೆಗೊಳ್ಳುವ ರೀತಿಯಲ್ಲಿ ಚಿತ್ರಿಸಿರುವುದನ್ನು ಅವರು ಈ ಎಲ್ಲ ವರ್ಣಚಿತ್ರಗಳ ಅಧ್ಯಯನದಿಂದ ತಿಳಿದುಬರುತ್ತದೆ.

ದೊಡ್ಡಬಳ್ಳಾಪುರದ ಸಾಂಸ್ಕೃತಿಕ ಪರಿಸರ ಮತ್ತು ಕಲಾವಿದರಾದ ರುಮಾಲೆ ಅವರ ಮೇಲೆ ಪ್ರಭಾವ ಬೀರಿ ಅವರೊಬ್ಬ ದೊಡ್ಡ ಕಲಾವಿದರಾಗಿ ರೂಪಗೊಳ್ಳಲು ಕಾರಣವಾಗಿದೆ. ಎಂಬ ವಿಷಯವನ್ನು ಇಲ್ಲಿ ಕಂಡುಕೊಳ್ಳಲಾಗಿದೆ. ಅಲ್ಲದೇ ಕಲಾಶಿಕ್ಷಣ, ಕಲಾಗುರುಗಳು ಅವರ ಸಹಪಾಠಿಗಳ ಬಗ್ಗೆ ಚರ್ಚಿಸಲಾಗಿದೆ.

ಮೈಸೂರು ಚಾಮರಾಜೇಂದ್ರ ಮತ್ತು ಬೆಂಗಳೂರು ಕಲಾಮಂದಿರದ ಕಲಾಶಾಲೆಯಲ್ಲಿ ಚಿತ್ರಕಲೆಯನ್ನು ನೈಜಶೈಲಿಯಲ್ಲಿ ಕಲಿತ ಇವರು ನಂತರದಲ್ಲಿ ತಮ್ಮದೇ ಆದ ಶೈಲಿಯನ್ನು ರೂಪಿಸಿಕೊಂಡು ನಾಡಿನ ಕಲಾರಂಗದಲ್ಲಿ ಗುರುತಿಸುವಂತಾದರು. ಯಾವ-ಯಾವ ಅಂಶಗಳು ಸಹಕಾರಿಯಾದವು ಎಂಬುದನ್ನು ಇಲ್ಲಿ ವಿವೇಚಿಸಲಾಗಿದೆ.

ರುಮಾಲೆಯವರ ಒಟ್ಟು ಕಲಾಕೃತಿಗಳನ್ನು ಸಮೀಕ್ಷಿಸಿದಾಗ ವರ್ಣಚಿತ್ರಗಳು ಕುತೂಹಲಕರ ಅಂಶಗಳು ಕಂಡುಬರುತ್ತವೆ ಎಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

**ಪ್ರಸ್ತುತ ಅಧ್ಯಯನದ ಪ್ರಮುಖ ಫಲಿತಗಳು**

ರುಮಾಲೆಯವರ ಭಾವಚಿತ್ರಗಳು ಪೂರ್ಣಭಾವಚಿತ್ರಗಳು ಜೀವಂತಿಕೆಯಿಂದ ಕೂಡಿದ್ದು, ಭಾವನೆಗಳ ಜೊತೆಗೆ ಸ್ಪಂದಿಸುತ್ತವೆ. ಇನ್ನು ಕೆಲವು ಪ್ರಕೃತಿಯ ಕಲಾಕೃತಿಗಳು ನೈಜತೆಯನ್ನು ಮೂಡಿಸಿವೆ. ದಿನನಿತ್ಯದ ರೇಖಾಚಿತ್ರಗಳು ಒಂದು ಬಗೆಯಾದರೆ, ನಿಸರ್ಗಚಿತ್ರಗಳ ಕೆಲವು ರೇಖಾಚಿತ್ರಗಳು ವಿಶಿಷ್ಟವಾದ ಶೈಲಿಯಲ್ಲಿವೆ.

ಪ್ರಕೃತಿ ಚಿತ್ರಗಳಲ್ಲಿ ವೇಗವಾದ ಚಲನೆಯಿಂದ ಕೂಡಿದ ಕುಂಚದ ಸೆಳೆತಗಳು ವರ್ಣವೈಖರಿ, ಹಿನ್ನೆಲೆ, ಮುನ್ನೆಲೆಯಲ್ಲಿ ಅಳವಡಿಸುವ ಸ್ಥಳಾವಕಾಶ ವಿಶಿಷ್ಟ ಅಂಶಗಳಾಗಿವೆ. ಕಲಾಕೃತಿಗಳಲ್ಲಿ ಇವರು ಅಳವಡಿಸಿರುವ ವರ್ಣವೈವಿಧ್ಯತೆ ಕಣ್ಣಿಗೆ ಆನಂದವನ್ನು ಉಂಟುಮಾಡುವ ಬಣ್ಣಗಳಾಗಿವೆ. ಹೀಗೆ ಹಾಲಭಾವಿಯವರ ಅಧ್ಯಯನ ವೈವಿಧ್ಯತೆಯಿಂದ ಕೂಡಿರುವುದು.



ಚಿತ್ರ ಕಲಾವಿದ ರೂಮಾಲೆ ಚನ್ನಬಸವಯ್ಯಾನವರು
(ಸ್ವಾತಂತ್ರ್ಯ ಹೋರಾಟಗಾರರು)



ರೂಮಾಲೆ ಆರ್ಟಗ್ಯಾಲರಿ

# ಅನುಬಂಧಗಳು

೧. ರುಮಾಲೆಯವರ ಜೀವನ

೨. ರುಮಾಲೆಯವರ ಕಲಾಕೃತಿಗಳ ಸಂಗ್ರಹ

೩. ಪರಾಮರ್ಶನ ಗ್ರಂಥಗಳು

೪. ಛಾಯಾ ಚಿತ್ರಗಳು

ಅನುಬಂಧ ೧

## ರುಮಾಲೆಯವರ ಜೀವನ

೧೯೧೦ - ಜನನ, ದೊಡ್ಡಬಳ್ಳಾಪುರ.

೧೯೨೯-೩೦ - ಬೆಂಗಳೂರಿನ ಕಲಾಮಂದಿರದಲ್ಲಿ ವಿದ್ಯಾಭ್ಯಾಸ.

೧೯೩೦ - ಗಾಂಧೀಜಿಯವರ ಸಾಮೂಹಿಕ ಸತ್ಯಾಗ್ರಹದಲ್ಲಿ ಭಾಗಿ.

೧೯೩೦-೩೧ - ಬಿಜಾಪುರ ಮತ್ತು ಈಗ ಮಹಾರಾಷ್ಟ್ರದಲ್ಲಿರುವ ಅಹ್ಮದ್ ನಗರ ಜಿಲ್ಲೆಗೆ ಸೇರಿದ ವಿಸಾಪುರಗಳಲ್ಲಿ ಒಂಬತ್ತು ತಿಂಗಳು ರಾಜಕೀಯ ಖೈದಿ.

೧೯೩೪-೩೬ - ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಯಲ್ಲಿ, ತೈಲಚಿತ್ರಣದ ವಿಶೇಷ ಅಧ್ಯಯನ.

೧೯೩೫ - ಕಲ್ಕತ್ತಾದ ಅಕಾಡೆಮಿ ಆಫ್ ಫೈನ್ ಆರ್ಟ್ಸ್ ಬಹುಮಾನ.

೧೯೩೬-೪೦ - ಮೈಸೂರಿನ ಸತ್ಯಾಗ್ರಹ ಚಳುವಳಿಯಲ್ಲಿ ಸಕ್ರಿಯ ಪಾತ್ರ

೧೯೩೯-೪೦ - ಬೆಂಗಳೂರಿನ ಸೆಂಟ್ರಲ್ ಜೈಲು ಮತ್ತು ಬೈರಮಂಗಲ ಕ್ಯಾಂಪ್ ಜೈಲುಗಳಲ್ಲಿ ಕಠಿಣ ಸೆರೆಮನೆ ವಾಸ.

೧೯೪೦-೪೬ - ಶ್ರೀ ತಪಸ್ವೀಜಿ ಅವರ ಸೇವೆ.

೧೯೪೬ - ಕಲ್ಕತ್ತಾದ ಅಕಾಡೆಮಿ ಆಫ್ ಫೈನ್ ಆರ್ಟ್ಸ್ ಸಂಸ್ಥೆಯ ಹನ್ನೊಂದನೆ ವಾರ್ಷಿಕ ಕಲಾಪ್ರದರ್ಶನದಲ್ಲಿ ಬಹುಮಾನ.

೧೯೪೬-೫೬ - ಆಗಿನ ಮೈಸೂರು ರಾಜ್ಯದ ಕಾಂಗ್ರೆಸ್ ಸೇವಾದಳ ಮತ್ತು ಭಾರತ್ ಸೇವಾ ದಳಗಳ ವ್ಯವಸ್ಥಾಪಕ ಕಾರ್ಯದರ್ಶಿ.

೧೯೫೨-೬೦ - ಮೈಸೂರು ರಾಜ್ಯದ ಶಾಸಕರ ಸಮಿತಿ ಸದಸ್ಯ.

೧೯೫೬-೬೦ - 'ತಾಯಿನಾಡು' ದಿನಪತ್ರಿಕೆಯ ಸಂಪಾದಕ.

೧೯೬೦-೬೨ - ಆಂಧ್ರ ಪ್ರದೇಶದ ಕಾಕಿನಾಡದ ಬಳಿ ಶ್ರೀ ಶಿವಬಾಲಯೋಗಿಗಳ ಸೇವೆ.

೧೯೬೫ - ಶರಾವತಿ ಜಲ ವಿದ್ಯುಚ್ಛಕ್ತಿ ಯೋಜನೆಯು ಆರಂಭಗೊಂಡ ಸಂದರ್ಭದಲ್ಲಿ, ಕರ್ನಾಟಕ ಸರ್ಕಾರದ ಪರವಾಗಿ, ಅಮೆರಿಕನ್ ಧೂತನಿವಾಸಕ್ಕೆ ಜೋಗ ಜಲಪಾತದ ಜಲವರ್ಣ ಚಿತ್ರವೊಂದರ ಕೊಡುಗೆ

೧೯೬೭ - ಮೈಸೂರು ದಸರಾ ಪ್ರದರ್ಶನದಲ್ಲಿ ಪ್ರಶಸ್ತಿ

೧೯೬೯ - ರಿಂದ, ಕರ್ನಾಟಕ ಸರ್ಕಾರದ ಕೋರಿಕೆಯ ಅನುಸರವಾಗಿ, ಹಲವು ನೀರಾವರಿ ಯೋಜನೆಗಳ ಚಿತ್ರರಚನೆ.

೧೯೭೨ - ರಾಜ್ಯ ಲಲಿತಕಲಾ ಅಕಾಡೆಮಿ ಪ್ರಶಸ್ತಿ, ಕೇಂದ್ರ ಸರ್ಕಾರದಿಂದ ತಾಮ್ರಪತ್ರ ಪ್ರಶಸ್ತಿ.

೧೯೭೩ - ರುಮಾಲೆ ಕಲಾಸಂಗ್ರಹಾಲಯದ ಸ್ಥಾಪನೆ.

೧೯೮೩ - ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ

೧೯೮೪ - ಕಾವೇರಿಯ ಉಗಮಸ್ಥಾನದಿಂದ ಮೇಕೆದಾಟುವಿನವರೆಗೆ, ಐದು ವರ್ಷಗಳಲ್ಲಿ ಐವತ್ತೊಂದು ಕೃತಿಗಳನ್ನು ರಚಿಸಲು ರಾಜ್ಯ ಸರ್ಕಾರದ ಕೋರಿಕೆ.

೧೯೮೮ - ಫೆಬ್ರವರಿ, ನಿಧನ.

## ಅನುಬಂಧ ೨

### ರುಮಾಲೆಯವರ ಕಲಾಕೃತಿಗಳ ಸಂಗ್ರಹ

| ಹೆಸರು | ಮಾಧ್ಯಮ | ಸ್ಥಳ |
|---|---|---|
| **I. ಭಾವಚಿತ್ರಗಳು** | | |
| ಚಿತ್ರ ೧. ಧ್ಯಾನದಲ್ಲಿರುವ ಶಿವಬಾಲಯೋಗಿ ಸ್ವಾಮಿ | - ಜಲವರ್ಣಗಳು | ರುಮಾಲೆ ಆರ್ಟ್ ಗ್ಯಾಲರಿ |
| ಚಿತ್ರ ೨. ಮಾಧವರಾವ್ ಕಭೆ | | |
| ಚಿತ್ರ ೩. ಜಲಸ್ಕಂದನ ವಿದ್ಯೆಯಲ್ಲಿ ಶಿವಬಾಲಯೋಗಿಸ್ವಾಮಿ | | |
| ಚಿತ್ರ ೪. ಸಂಜಯ್ ಕಭೆಯವರ ಭಾವಚಿತ್ರ | | |
| ಚಿತ್ರ ೫. ಬಾಲಕನ ಭಾವಚಿತ್ರ | | |
| **II. ಪ್ರಕೃತಿ ಚಿತ್ರಗಳು** | | |
| ಚಿತ್ರ ೬. ಕೆ.ಆರ್. ಸರ್ಕಲ್ ಇದು ಬೆಂಗಳೂರಿನ ಒಂದು ದೃಶ್ಯ | - ಜಲವರ್ಣಗಳು | ರುಮಾಲೆ ಆರ್ಟ್ ಗ್ಯಾಲರಿ |
| ಚಿತ್ರ ೭. ಲಾಲ್‌ಬಾಗ್ ಒಳಬಾಗದ ಒಂದು ದೃಶ್ಯ | | |
| ಚಿತ್ರ ೮. ಚರ್ಚ್‌ವೊಂದರ ಚಿತ್ರ | | |
| ಚಿತ್ರ ೯. ಭದ್ರಾ ನದಿಯ ಹಿನ್ನೀರು | | |
| ಚಿತ್ರ ೧೦. ಹಿಡಕಲ್ ಅಣೆಕಟ್ಟು | | |
| ಚಿತ್ರ ೧೧. ಶ್ರೀಲಂಕಾದ ಬೀಚ್ ದೃಶ್ಯ | | |
| ಚಿತ್ರ ೧೨: ಭದ್ರಾನದಿಯ ದೃಶ್ಯ | | |
| ಚಿತ್ರ ೧೩: ಶ್ರೀಲಂಕಾದ ಒಂದು ದೃಶ್ಯ | | |
| ಚಿತ್ರ ೧೪: ರಸ್ತೆಯ ಪಕ್ಕದಲ್ಲಿ ಅರಳಿರುವ ಮರ | | |
| ಚಿತ್ರ ೧೫ ಕಾಲೇಜ್ ಆವರಣದಲ್ಲಿ ಅರಳಿದ ಹೂಗಳು | | |
| ಚಿತ್ರ ೧೬. ಅಲ್ಕೊಕರ್ ಚಿತ್ರಮಂದಿರದ ಒಂದು ಬದಿ | | |
| ಚಿತ್ರ ೧೭. ಕಬ್ಬನ್ ಪಾರ್ಕ್‌ನಲ್ಲಿ ಹಳದಿ ಹೂವಿನ ಮರ | | |
| ಚಿತ್ರ ೧೮. ಏತಾ ನೀರಾವರಿ ತೋಟದ ದೃಶ್ಯ | | |
| ಚಿತ್ರ ೧೯. ಮದ್ರಸ್ ಕೇಂದ್ರ ರೈಲುನಿಲ್ದಾಣ | | |
| ಚಿತ್ರ ೨೦. ಆಲಮಟ್ಟಿ ಅಣೆಕಟ್ಟು | | |
| ಚಿತ್ರ ೨೧. ಲಾಲ್‌ಬಾಗ್ ಕಾರಂಜಿ | | |
| ಚಿತ್ರ ೨೨. ಕಾರ್ಖಾನೆಯ ಬದಿಯಲ್ಲಿರುವ ಗುಡಿಸಲುಗಳು | | |

| ಹೆಸರು | ಮಾಧ್ಯಮ | ಸ್ಥಳ |
|---|---|---|
| ಚಿತ್ರ ೨೩. ಪ್ರಕೃತಿಯ ಮಡಿಲಿನಲ್ಲಿ ಮಂಟಪದ ದೃಶ್ಯ | - ಜಲವರ್ಣಗಳು | ರುಮಾಲೆ ಆರ್ಟ್ ಗ್ಯಾಲರಿ |
| ಚಿತ್ರ ೨೪. ಪ್ರಕೃತಿಯ ಒಂದು ದೃಶ್ಯ | | |
| ಚಿತ್ರ ೨೫. ಹಳದಿ ಹೂವಿನ ಮರದ ದೃಶ್ಯ | | |
| ಚಿತ್ರ ೨೬. ಶ್ರೀ ಪಶುಪತಿನಾಥ ಲಿಂಗಮಂ ಬೆಂಗಳೂರು | | |
| ಚಿತ್ರ ೨೭. ಬಂಡಿಪುರದ ಕೆರೆಯ ಚಿತ್ರ | | |
| ಚಿತ್ರ ೨೮. ಬಂಡಿಪುರದ ಕೆರೆಯಲ್ಲಿನ ಪ್ರತಿಬಿಂಬ | | |
| ಚಿತ್ರ ೨೯. ಕಬ್ಬನ್ ಪಾರ್ಕ್‌ನ ಬಣ್ಣಬಣ್ಣದ ಹೂವುಗಳು | | |
| ಚಿತ್ರ ೩೦. ಗಾಂಧೀನಗರದ ಪೆಟ್ರೋಲ್‌ಬಂಕ್ | | |
| ಚಿತ್ರ ೩೧. ಪ್ರಕೃತಿಯ ಒಂದು ನೋಟ | | |
| ಚಿತ್ರಿ ೩೨. ಪ್ರಕೃತಿಯ ಒಂದು ನೋಟ | | |
| ಚಿತ್ರ ೩೩. ಭಾಸ್ಯಂ ವೃತ್ತ ರಾಜಾಜಿನಗರ | | |
| ಚಿತ್ರ ೩೪. ಲಾರ್ಡ್‌ಕಬ್ಬನ್ ಪಾರ್ಕ್ | | |
| ಚಿತ್ರ ೩೫. ಪಂಪಾ ಸರೋವರ | | |
| ಚಿತ್ರ ೩೬. ಪ್ರಕೃತಿ ಒಂದು ನೋಟ | | |
| ಚಿತ್ರ ೩೭. ನೀರಿನಲ್ಲಿ ಮರದ ಪ್ರತಿಬಿಂಬ ಹಂಪಿ | | |
| ಚಿತ್ರ ೩೮. ಪ್ರಕೃತಿಯ ಒಂದು ನೋಟ | | |
| ಚಿತ್ರ ೩೯. ಬೆಂಗಳೂರಿನ ರಸ್ತೆಬದಿ | | |
| ಚಿತ್ರ ೪೦. ಪ್ರಕೃತಿಯದೃಶ್ಯ | | |
| ಚಿತ್ರ ೪೧. ರಾಜಾಜಿ ನಗರದ ಮನೆಯ ಒಂದು ನೋಟ | | |
| ಚಿತ್ರ ೪೨. ರಾಜಭವನದ ಹತ್ತಿರದ ಗೊಲ್ಮೊಹರ್‌ನ ಚಿತ್ರ | | |
| ಚಿತ್ರ ೪೩. ಹೈಕೋರ್ಟ್ ಹತ್ತಿರದ ಹಳದಿ ಹೂವಿನ ಮರ | | |
| ಚಿತ್ರ ೪೪. ಪ್ರಕೃತಿಯ ಒಂದು ನೋಟ | | |
| ಚಿತ್ರ ೪೫. ಮನೆಯ ಆವರಣದಲ್ಲಿ ಹೂವಿನ ಮರಗಳು | | |
| ಚಿತ್ರ ೪೬. ರಾಜಾಜಿನಗರದ ರಸ್ತೆ ಬದಿಯ ಒಂದು ದೃಶ್ಯ | | |
| ಚಿತ್ರ ೪೭. ಹೈಕೋರ್ಟ್‌ನ ಒಂದು ನೋಟ | | |
| ಚಿತ್ರ ೪೮. ಕೆ.ಆರ್. ಸರ್ಕಲ್ ಬೆಂಗಳೂರು | | |
| ಚಿತ್ರ ೪೯. ಹೈಕೋರ್ಟ್ ಹಿಂಭಾಗ ಬೆಂಗಳೂರು | | |
| ಚಿತ್ರ ೫೦. ಬಾಲ ಭವನ ಹತ್ತಿರದ ಪಾರ್ಕ್ ದೃಶ್ಯ | | |

| ಹೆಸರು | ಮಾಧ್ಯಮ | ಸ್ಥಳ |
|---|---|---|
| ಚಿತ್ರ ೫೧. ಗೊಲ್ಮೊಹರ್ ಹೂವಿನ ಚಿತ್ರ | - ಜಲವರ್ಣಗಳು | ರುಮಾಲೆ ಆರ್ಟ್ ಗ್ಯಾಲರಿ |
| ಚಿತ್ರ ೫೨. ಹೈಕೋರ್ಟ್ ಹತ್ತಿರ ಒಂದು ದೃಶ್ಯ | | |
| ಚಿತ್ರ ೫೩. ಶ್ರೀ ಮಂಜುನಾಥನ ಲಿಂಗ | | |
| ಚಿತ್ರ ೫೪. ಶಿವಲಿಂಗ ಮತ್ತು ಶಿವಬಾಲಯಾಗಿ ಸ್ವಾಮಿ | | |
| ಚಿತ್ರ ೫೫. ಶ್ರೀರಂಗ ಪಟ್ಟಣದ ಶ್ರೀರಂಗನಾಥ ಸ್ವಾಮಿ | | |
| ಚಿತ್ರ ೫೬. ತುಳಾಜಾ ಭವಾನಿ | | |
| ಚಿತ್ರ ೫೭. ಲಿಂಗವನ್ನು ಸುತ್ತುವರೆದ ಸರ್ಪ | | |
| ಚಿತ್ರ ೫೮. ಲಿಂಗಕ್ಕೆ ರಕ್ಷಣೆ ಕೊಡುವ ಸರ್ಪ | | |
| ಚಿತ್ರ ೫೯. ಗೋಕರ್ಣದ ಲಿಂಗ | | |
| ಚಿತ್ರ ೬೦. ಭುವನೇಶ್ವರಿ | | |
| ಚಿತ್ರ ೬೧. ಕಾವೇರಿ ಪ್ರಕೃತಿಯ ಚಿತ್ರ | | |
| ಚಿತ್ರ ೬೨. ಮಸ್ತಿಯ ಮುಂಜಾನೆ | | |
| ಚಿತ್ರ ೬೩. ಸಾಲಿಗ್ರಾಮದಲ್ಲಿ ಶಿವಬಾಲ ಯೋಗಿಗಳ ಪ್ರತಿರೂಪ | | |
| ಚಿತ್ರ ೬೪. ಲಿಂಗದ ಚಿತ್ರ | | |
| ಚಿತ್ರ ೬೫. ಪ್ರಕೃತಿಯ ಒಂದು ನೋಟ | | |
| ಚಿತ್ರ ೬೬. ಶ್ರೀಲಂಕಾದ ಒಂದು ನೋಟ | | |
| ಚಿತ್ರ ೬೭. ಕರಿಘಟ್ಟ ಬೆಟ್ಟ | | |
| ಚಿತ್ರ ೬೮. ಬ್ರಹ್ಮಕಮಲ | | |
| ಚಿತ್ರ ೬೯. ಕಬ್ಬನ್‌ಪಾರ್ಕ್‌ನ ಕೊನೆಯ ಚಿತ್ರ | | |
| ಚಿತ್ರ ೭೦. ಶ್ರೀಲಂಕಾದ ಒಂದು ನೋಟ | | |
| ಚಿತ್ರ ೭೧. ಶ್ರೀಲಂಕಾ ಬಿಚ್ | | |
| ಚಿತ್ರ ೭೨. ಪ್ರಕೃತಿ ದೃಶ್ಯ | | |
| ಚಿತ್ರ ೭೩. ಶ್ರೀಲಂಕಾದ ಒಂದು ನೋಟ | | |
| ಚಿತ್ರ ೭೪. ಬೆಂಗಳೂರು ರಸ್ತೆಬದಿಯ ನೋಟ | | |
| ಚಿತ್ರ ೭೫. ಕೂಡಲ ಸಂಗಮದ ನಿಸರ್ಗ ದೃಶ್ಯ | | |
| ಚಿತ್ರ ೭೬. ಲಾಲಾಬಾಗನ ಚಿತ್ರ | | |

| ಹೆಸರು | ಮಾಧ್ಯಮ | ಸ್ಥಳ |
|---|---|---|
| **II ತೈಲವರ್ಣ ಚಿತ್ರಗಳು** | | |
| **ಭಾವಚಿತ್ರಗಳು** | | |
| ಚಿತ್ರ ೭೭. ಜಲಸ್ಕಂದನ ವಿದ್ಯೆಯಲ್ಲಿ ಶಿವಬಾಲಯೋಗಿ | - ತೈಲವರ್ಣಗಳು | ರುಮಾಲೆ ಆರ್ಟ್ ಗ್ಯಾಲರಿ |
| ಚಿತ್ರ ೭೮. ಕಲಾವಿದನ ಕಲ್ಪನೆಯಲ್ಲಿ ಪಂಜಾಬಿ ಯುವಕ | | |
| ಚಿತ್ರ ೭೯. ಶಬಲಾದೇವಿಕಬೆ | | |
| ಚಿತ್ರ ೮೦. ಸಾದುವಿನ ಭಾವಚಿತ್ರ | | |
| ಚಿತ್ರ ೮೧. ಬೆಂಗಳೂರಿನ ಗುಲ್ಮೊಹರ್ ಹೂವಿನ ಮರದ ದೃಶ್ಯ | | |
| ಚಿತ್ರ ೮೨. ಕೂಡಲ ಸಂಗಮ | | |
| ಚಿತ್ರ ೮೩. ಹೈಕೋರ್ಟ್ ಹಿಂಬಾಗದ ರಶ್ಮಿಲಾಸ್ಯ | | |
| ಚಿತ್ರ ೮೪. ಗೊಲ್ಮೊಹರ್‌ನ ಹೂವಿನಚಿತ್ರ | | |
| ಚಿತ್ರ ೮೫. ತಲಕಾವೇರಿಯ ಉಗಮಸ್ಥಾನ | | |
| ಚಿತ್ರ ೮೬. ನವರಂಗ ಉದ್ಯಾನವನದಲ್ಲಿ ಅರಳಿದ | | |
| ಚಿತ್ರ ೮೭. ಬೆಂಗಳೂರು ಕಬ್ಬನ್‌ಪಾರ್ಕ್ | | |
| ಚಿತ್ರ ೮೮. ಬೆಂಗಳೂರಿನ ಕಬ್ಬನ್‌ಪಾರ್ಕ್ | | |
| ಚಿತ್ರ ೮೯. ಕಬ್ಬನ್‌ಪಾರ್ಕ್‌ನ ಹಳದಿ ಪೂವಿನ ಮರ | | |
| ಚಿತ್ರ ೯೦. ಗೊಲ್ಮೊಹರ್-ರಾಜಾಜಿನಗರ | | |
| ಚಿತ್ರ ೯೧. ನಂದಿ ಮತ್ತು ಶಿವಲಿಂಗ | | |
| ಚಿತ್ರ ೯೨. ಗುಲ್ಮೊಹರ್ ಹೂವುಗಳ ದೃಶ್ಯ | | |

## ಪರಾಮರ್ಶನ ಗ್ರಂಥಗಳು


| | | |
|---|---|---|
| ೧. | ಎಂ.ವಿ. ಚೆಟ್ಟಿಯವರ ಜೀವನ, ೧೯೮೫ | ಡಾ. ಲಕ್ಷ್ಮೀದೇವಿ ಗವಾಯಿ |
| ೨. | ವರ್ಣ ಸಂಚಯ<br>ಪ್ರ. ವಿಜಯ ಚಿತ್ರಕಲಾ ಮಂದಿರ ಮಹಾವಿದ್ಯಾಲಯ<br>ಇಳಕಲ್, ೨೦೦೧ | ಡಾ. ಎಸ್.ಸಿ. ಪಾಟೀಲ |
| ೩. | ಕರ್ನಾಟಕದ ಜನಪದ ಚಿತ್ರಕಲೆ, ೧೯೯೧ | ಡಾ. ಎಸ್.ಸಿ. ಪಾಟೀಲ |
| ೪. | ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, ೧೯೯೮ | ಡಾ. ಅ.ಲ. ನರಸಿಂಹನ್ |
| ೫. | ಕರ್ನಾಟಕದ ಭಿತ್ತಿ ಚಿತ್ರಕಲೆ, ೨೦೦೦ | ಡಾ. ಯಾದಪ್ಪ ಪರದೇಶಿ |
| ೬. | ಕರ್ನಾಟಕದ ಜನಪದ ಶಿಲ್ಪಕಲೆ, ೨೦೦೨ | ಡಾ. ಶಿವಾನಂದ ಬಂಟನೂರು |
| ೭. | ಕಲಾವಿದ ಆರ್.ಎಂ. ಹಡಪದ, ೨೦೦೩ | ಡಾ. ಸಿದ್ಧಲಿಂಗಸ್ವಾಮಿ ಹಿರೇಮಠ |
| ೮. | ಸುರಪುರ ಶೈಲಿ ಚಿತ್ರಕಲೆ, ೨೦೦೩ | ಡಾ. ಮಲ್ಲಿಕಾರ್ಜುನ ಬಾಗೂಡಿ |
| ೯. | ಚಿತ್ರಕಲಾವಿದ ಜೆ.ಎಸ್. ಖಂಡೇರಾವ್, ೨೦೦೨ | ಡಾ. ಮಲ್ಲಿಕಾರ್ಜುನ ಬಾಗೂಡಿ |
| ೧೦. | ಕಲಾವಿದ ಡಿ.ವಿ. ಹಾಲಭಾವಿಯವರ<br>ಬದುಕು ಮತ್ತು ಕಲಾಕೃತಿಗಳು, ೨೦೦೫ | ಶಂಕರಪ್ಪ ಎ. ಕುಂದಗೋಳ |
| ೧೧. | ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ<br>ಚಿತ್ರಕಲಾ ಶಿಕ್ಷಣ, ೧೯೮೩ | ಲೇಖಕ. ಡಾ. ಎಸ್.ಸಿ. ಪಾಟೀಲ |
| ೧೨. | ಕನ್ನಡ ಹಸ್ತಪ್ರತಿಗಳು, ೧೯೮೭ | ಡಾ. ಬಿ.ಕೆ. ಹಿರೇಮಠ |
| ೧೩. | ತೊಗಲುಗೊಂಬೆ ಚಿತ್ರಕಲೆ | ಡಾ. ಶಶಿಕಲಾ ಹೂಗಾರ |
| ೧೪. | ಚಿತ್ರಕಲಾ ಪ್ರಪಂಚ, ೧೯೯೩<br>ಪ್ರ. ಕರ್ನಾಟಕ ಲಲಿತಕಲಾ ಅಕಾಡೆಮಿ | ಸಂ. ಟಿ.ಆರ್. ತಿಪ್ಪೇಸ್ವಾಮಿ |
| ೧೫. | ರುಮಾಲೆ ಚನ್ನಬಸವಯ್ಯ, ೧೯೮೮<br>ಪ್ರ. ಕರ್ನಾಟಕ ಲಲಿತಕಲಾ ಅಕಾಡೆಮಿ | ಲೇಖಕ. ಕೆ.ಎಸ್. ಶ್ರೀನಿವಾಸಮೂರ್ತಿ |
| ೧೬. | ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು | ಸಂ. ಡಾ. ಎಸ್.ಸಿ. ಪಾಟೀಲ |
| ೧೭. | ಕರ್ನಾಟಕ ರಾಜಕೀಯ ಚಿಂತನೆ, ೨೦೦೩ | ಸಂ. ಕೆ.ಆರ್. ಕಮಲೇಶ್ |

| | | |
|---|---|---|
| ೧೮. | ಸಮಕಾಲೀನ ಕಲೆ ಲಲಿತಕಲಾ, ೧೯೮೭ | ಸಂ. ಬಿ.ಪಿ.ಕೆ. ಶಾಸ್ತ್ರಿ |
| ೧೯. | ಎಸ್.ಎಸ್. ಕುಕ್ಕೆ ಕರ್ನಾಟಕ ಲಲಿತಕಲಾ ಆಕಾಡೆಮಿ ಬೆಂಗಳೂರು | ಸಂ. ತಿ.ಸು. ಕೃಷ್ಣಶೆಟ್ಟಿ |
| ೨೦. | ಎಂ.ಟಿ.ವಿ. ಆಚಾರ್ಯ, ೧೯೯೦ ಕರ್ನಾಟಕ ಲಲಿತಕಲಾ ಆಕಾಡೆಮಿ | ಲೇಖಕ. ತಿ.ಸು. ಕೃಷ್ಣಶೆಟ್ಟಿ |
| ೨೧. | ಕಲಾ ಚರಿತ್ರೆ, ೧೯೯೮ | ಅಶೋಕ ಟಿ.ಪಿ. ಅಕ್ಕಿ |



ಶಿವಬಾಲಯೋಗಿ ಸ್ವಾಮಿಜಿ ಅವರೊಂದಿಗೆ ಕಬೆ ಕುಟುಂಬ




ಕಬೆ ಕುಟುಂಬದವರು

## ಕ್ಷೇತ್ರ ಕಾರ್ಯದ ಸಂಬಂಧರ್ಬದಲ್ಲಿ



ರೂಮಾಲೆ ನಾಗರಾಜರೊಂದಿಗೆ ಸಂಶೋಧನಾ ವಿದ್ಯಾರ್ಥಿ



ಪುಷ್ಪದ್ರಾವಿಡ ಅವರೊಂದಿಗೆ ಸಂಶೋಧನಾ ವಿದ್ಯಾರ್ಥಿ



[illegible] ಅವರೊಂದಿಗೆ ಸಂಶೋಧನಾ ವಿದ್ಯಾರ್ಥಿ

